ಪ್ರಜಾವಾಣಿ ಶುಕ್ರವಾರ • ಜೂನ್ 30, 2017



ಸಿಜಿಕೆ ಪಬ್ಲಿಕೇಷನ್ ಮತ್ತು ಗಾಂಧಿಯಾನ ಟ್ರಸ್ಟ್ ಆಶ್ರಯದಲ್ಲಿ ನಗರದಲ್ಲಿ ಗುರುವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಬೈರಮಂಗಲ ರಾಮೇಗೌಡ (ಬಲಬದಿ) ಅವರ 'ಸರ್ವೋದಯ', 'ರಸಲಹರಿ' ಹಾಗೂ 'ರಸಸಿದ್ಧಿ' ಪುಸ್ತಕಗಳನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಮನು ಬಳಿಗಾರ (ಎಡದಿಂದ ಎರಡನೆಯವರು) ಬಿಡುಗಡೆ ಮಾಡಿದರು. ಲೇಖಕ ಅಗ್ರಹಾರ ಕೃಷ್ಣಮೂರ್ತಿ, ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ.ಕೃಷ್ಣ ಇದ್ದಾರೆ

ಕನ್ನಡಪ್ರಭ
ಶುಕ್ರವಾರ 30.6.2017
ಬೆಂಗಳೂರು

# ಗಾಂಧಿ ವಿಚಾರ ಯುವಜನರಿಗೆ ತಲುಪಿಸಿ: ದೊರೆಸ್ವಾಮಿ

## ಡಾ.ಬೈರಮಂಗಲ ರಾಮೇಗೌಡರ 'ಸರ್ವೋದಯ', 'ರಸಲಹರಿ', 'ರಸಸಿದ್ಧಿ' ಕೃತಿಗಳ ಬಿಡುಗಡೆ

• ಕನ್ನಡಪ್ರಭ ವಾರ್ತೆ ಬೆಂಗಳೂರು

ಮೌಲ್ಯಯುತ ವಿಚಾರಗಳನ್ನು ಯುವಜನರಲ್ಲಿ ಬಿತ್ತುವ ಮೂಲಕ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಗೆ ನಾಂದಿ ಹಾಡಬೇಕು ಎಂದು ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ ಅಭಿಪ್ರಾಯಪಟ್ಟರು.

ಸಿವಿಜಿ ಪ್ರಕಾಶನ ಮತ್ತು ಗಾಂಧಿಯಾನ ಟ್ರಸ್ಟ್ ಸಹಯೋಗದಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಕಾಲೇಜು ಕಟ್ಟಡ ಅಧ್ಯಾಪಕರ ಒಕ್ಕೂಟ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ, ಹಮ್ಮಿಕೊಂಡಿದ್ದ ಡಾ. ಬೈರಮಂಗಲ ರಾಮೇಗೌಡರ 'ಸರ್ವೋದಯ', 'ರಸಲಹರಿ', 'ರಸಸಿದ್ಧಿ' ಕೃತಿಗಳ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಮಹಾತ್ಮಾಗಾಂಧಿ ವಿಚಾರಗಳನ್ನು ಜನಸಾಮಾನ್ಯರಿಗೆ ತಲುಪಿಸುವ ಕಾರ್ಯವಾಗಬೇಕು. ಗಾಂಧಿ ಹಾಗೂ ಅವರ ಸರ್ವೋದಯದ ಆಯಾಮಗಳ ಕುರಿತಂತೆ ಸಮಗ್ರ ಆಳವಾದ ಅಧ್ಯಯನವಾಗಬೇಕು. ಮೌಲ್ಯಗಳ ಮೂಲಭೂತ ಬದಲಾವಣೆಯೇ ಕ್ರಾಂತಿ. ಇದನ್ನು ವಿಚಾರ ಕ್ರಾಂತಿ ಮೂಲಕ ಸಾಧಿಸಬೇಕು ಎಂದು ಕರೆ ನೀಡಿದರು. ಇಂದು ನಾವು ವಿಜ್ಞಾನ, ತಂತ್ರಜ್ಞಾನ ಸೇರಿದಂತೆ ಸರ್ವ ಕ್ಷೇತ್ರಗಳಲ್ಲಿ ಅಭಿವೃದ್ಧಿ ಕಂಡಿದ್ದರೂ ಬಡತನವನ್ನು ಬುಡ ಸಮೇತ ತೊಲಗಿಸಲು ನಮ್ಮಿಂದ ಸಾಧ್ಯವಾಗಿಲ್ಲ. ನಮ್ಮಲ್ಲಿ ತುಂಬಿರುವ ಅಜ್ಞಾನವನ್ನು ಕಿತ್ತೆಸೆದು ಹಾಕದ ಹೊರತು, ಮಾನವೀಯತೆಯ ಸಮ ಸಮಾಜ ನಿರ್ಮಾಣ ಅಸಾಧ್ಯ ಎಂದರು.



ಡಾ. ಬೈರಮಂಗಲ ರಾಮೇಗೌಡರು ರಚಿಸಿರುವ ಮೂರು ಪುಸ್ತಕಗಳನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಡಾ. ಮನು ಬಳಿಗಾರ್ ಲೋಕಾರ್ಪಣೆಗೊಳಿಸಿದರು. ಡಾ. ಬೆಳಕೆರೆ ಲಿಂಗರಾಜಯ್ಯ, ಅಗ್ರಹಾರ ಕೃಷ್ಣಮೂರ್ತಿ, ಎಚ್.ಎಸ್. ದೊರೆಸ್ವಾಮಿ, ಡಾ.ವೂಡೇ ಪಿ. ಕೃಷ್ಣ ಪಾಲ್ಗೊಂಡಿದ್ದರು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಡಾ. ಮನು ಬಳಿಗಾರ್ ಕೃತಿಗಳನ್ನು ಲೋಕಾರ್ಪಣೆಗೊಳಿಸಿ ಮಾತನಾಡಿ, ಓದುಗ ಈವರೆಗೆ ಓದಲಾಗದ ವಿಭಿನ್ನವಾದ ಅಧ್ಯಯನ ರುಚಿಯುಳ್ಳ ಲೇಖನಗಳು ರಸಲಹರಿ ಕೃತಿಯಲ್ಲಿವೆ. ಕುವೆಂಪು, ಜಿ.ಎಸ್. ಶಿವರುದ್ರಪ್ಪ, ತೇಜಸ್ವಿಯವರ ಪ್ರಭಾವದ ಛಾಯೆ ಇರುವ ಲೇಖಕರು ಸ್ವಂತಿಕೆಯನ್ನು ಕಾಪಾಡಿಕೊಂಡಿದ್ದಾರೆ ಎಂದರು.

ಕೇಂದ್ರ ಸಾಹಿತ್ಯ ಅಕಾಡೆಮಿ ನಿವೃತ್ತ ಕಾರ್ಯದರ್ಶಿ ಅಗ್ರಹಾರ ಕೃಷ್ಣಮೂರ್ತಿ ಮಾತನಾಡಿ, ಒಬ್ಬ ಲೇಖಕನನ್ನು ಇನ್ನೊಂದು ಕೃತಿಯೆಡೆಗೆ ಸೆಳೆಯುವುದೇ ರಸ ಸಿದ್ಧಾಂತದ ವಿಶಿಷ್ಟ ಗುಣ. ರಾಮೇಗೌಡರ ರಸ ಸಿದ್ಧಾಂತದ ಮಾದರಿ ಜಿಎಸ್ಎಸ್ ಅವರಿಗಿಂತ ಭಿನ್ನವಾದುದು. ಈ ಪುಸ್ತಕಗಳಲ್ಲಿ ಸಾಹಿತ್ಯೇತರ ವಿಚಾರಗಳನ್ನು ಓದುಗರಿಗೆ ರಸಲಹರಿ ಮೂಲಕ ಮನಮುಟ್ಟುವಂತೆ ತಿಳಿಸಿಕೊಡಲಾಗಿದೆ ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ, ವಿಮರ್ಶಕ ಡಾ. ಬೈರಮಂಗಲ ರಾಮೇಗೌಡ, ಸಿವಿಜಿ ಪ್ರಕಾಶನದ ಚಂದ್ರು, ಗಿರಿಜಾ ಚಂದ್ರು, ಬೆಂ.ವಿ.ಕಾ. ಕನ್ನಡ ಅಭಿವೃದ್ಧಿ ಒಕ್ಕೂಟದ ಅಧ್ಯಕ್ಷ ಡಾ. ಬೆಳಕೆರೆ ಲಿಂಗರಾಜಯ್ಯ ಉಪಸ್ಥಿತರಿದ್ದರು.

ವಿಶ್ವವಾಣಿ

ಬೆಂಗಳೂರು
vishwavani.news
30.06.2017 ಶುಕ್ರವಾರ

# ಲೇಖಕ ಪ್ರಶಸ್ತಿಗಳ ಬೆನ್ನತ್ತಬಾರದು: ಮನು ಬಳಿಗಾರ

**ವಿಶ್ವವಾಣಿ ಸುದ್ದಿಮನೆ** ಬೆಂಗಳೂರು

ಓದುಗನ ಅಭಿರುಚಿ ತಿಳಿದುಕೊಂಡು, ಅವನು ಓದಿರಲಾರದ ವಿಷಯವನ್ನು ಅರಿತು ಬರೆದು ಮಾರ್ಗದರ್ಶನ ಮಾಡುವ ಕಲೆ ಡಾ.ಬೈರಮಂಗಲ ರಾಮೇಗೌಡರಿಗೆ ಇದೆ ಎಂದು ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ. ಮನು ಬಳಿಗಾರ ಹೇಳಿದರು.

ನಗರದ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸಿವಿಜಿ ಪಬ್ಲಿಕೇಷನ್ ಹಾಗೂ ಗಾಂಧಿಯಾನ ಟ್ರಸ್ಟ್ ವತಿಯಿಂದ ನಡೆದ ಡಾ. ಬೈರಮಂಗಲ ರಾಮೇಗೌಡರ 3 ಪುಸ್ತಕ (ಸರ್ವೋದಯ; ರಸಲಹರಿ ಮತ್ತು ರಸಸಿದ್ಧಿ) ಗಳನ್ನುಲೋಕಾರ್ಪಣೆ ಮಾಡಿ ಮಾತನಾಡಿದರು.

ರಾಮೇಗೌಡರು ತಮ್ಮ ಬರವಣಿಗೆಯಲ್ಲಿ ಸ್ವಂತಿಕೆಯನ್ನು ಉಳಿಸಿಕೊಂಡವರು. ತಮ್ಮದೇ ಆದ ರೀತಿಯಲ್ಲಿ ಓದುಗನನ್ನು ಆಕರ್ಷಿಸುವಂತೆ ಬರೆಯುವ ಒಬ್ಬ ಉತ್ತಮ ವಿಮರ್ಶಕ, ಲೇಖಕ ಎಂದು ಶ್ಲಾಘಿಸಿದರು.

ಒಬ್ಬ ಲೇಖಕ ಪ್ರಶಸ್ತಿಗಳ ಬೆನ್ನತ್ತಬಾರದು. ಬದಲಾಗಿ ಜನರ ಮನಸ್ಸಿನಲ್ಲಿ ಉಳಿಯುವಂತಹ ಬರವಣಿಗೆಗಳನ್ನು ನೀಡಬೇಕು. ನಂತರ ಪ್ರಶಸ್ತಿಗಳ ಆತನನ್ನು ಹುಡುಕಿಕೊಂಡು ಬರುತ್ತವೆ. ಬರಹಗಾರ ಪೂರ್ವಾಗ್ರಹ ಪೀಡಿತನಾಗದೆ, ಜಾತ್ಯಾತೀತತೆಯಿಂದ ಬರೆಯಬೇಕು ಎಂಬುದನ್ನು ಅವರು ತಮ್ಮ ರಸಸಿದ್ಧಿ ಪುಸ್ತಕದ ಮೂಲಕ ತೋರಿಸಿದ್ದಾರೆ ಎಂದು ಹೇಳಿದರು.

ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್ ದೊರೆಸ್ವಾಮಿ ಮಾತನಾಡಿ, ರಾಜಕೀಯ ವಿಚಾರಕ್ರಾಂತಿಯಲ್ಲಿ ಸದ್ಯದ ರಾಜಕಾರಣಿಗಳು ವಿಫಲರಾಗಿದ್ದಾರೆ ಎಂದರು.



ಡಾ. ಬೈರಮಂಗಲ ರಾಮೇಗೌಡರ ಮೂರು ಪುಸ್ತಕಗಳನ್ನು ಕನ್ನಡ ಸಾಹಿತ್ಯ ಪರಿಷತ್ತ ಅಧ್ಯಕ್ಷ ಡಾ. ಮನು ಬಳಿಗಾರ ಲೋಕಾರ್ಪಣೆ ಮಾಡಿದರು. ಎಚ್.ಎಸ್. ದೊರೆಸ್ವಾಮಿ, ಡಾ. ವೊಡೇ ಪಿ. ಕೃಷ್ಣ ಚಂದ್ರು, ಡಾ.ಬೆಳಕೆರೆ ಲಿಂಗರಾಜು, ಅಗ್ರಹಾರ ಕೃಷ್ಣಮೂರ್ತಿ, ಡಾ. ಉಡಿಯಕ್ಕಿ ಕೃಷ್ಣ ಹಾಗೂ ಪ್ರೊ. ಶಾಂತರಾಜು ಇದ್ದರು.

ಹೊಸ ದಿಗಂತ
ಶುಕ್ರವಾರ
30 ಜೂನ್ 2017

### ಸರ್ವೋದಯ, ರಸಲಹರಿ ಮತ್ತು ರಸಸಿದ್ಧಿ ಪುಸ್ತಕ ಲೋಕಾರ್ಪಣೆ

# ಮನಸ್ಸಿನಲ್ಲಿ ಉಳಿಯುವ ಬರವಣಿಗೆ ಇರಲಿ

▸ ದಿಗಂತವರದಿ: ಬೆಂಗಳೂರು ಜೂ.29

ಲೇಖಕನಾದವನು ಪ್ರಶಸ್ತಿಗಳ ಬೆನ್ನು ಹತ್ತಿದವರಾಗಿದ್ದಾರೆ. ಅದರ ಬದಲಾಗಿ ಜನರ ಮನಸ್ಸಿನಲ್ಲಿ ಉಳಿಯುವಂತಹ ಬರವಣಿಗೆಯನ್ನು ನೀಡಬೇಕು ಎಂದು ಕನ್ನಡ ಸಾಹಿತ್ಯ ಪರಿಷತ್ತು ಅಧ್ಯಕ್ಷ ಡಾ.ಮನುಬಳಿಗಾರ್ ಹೇಳಿದರು.

ನಗರದ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸಿವಿಜಿ ಪಬ್ಲಿಕೇಷನ್ ಹಾಗೂ ಗಾಂಧಿಯಾನ ಟ್ರಸ್ಟ್ ವತಿಯಿಂದ ಆಯೋಜಿಸಿದ್ದ ಡಾ.ಬೈರಮಂಗಲ ರಾಮೇಗೌಡರ 3 ಪುಸ್ತಕ (ಸರ್ವೋದಯ, ರಸಲಹರಿ ಮತ್ತು ರಸಸಿದ್ಧಿ)ಗಳನ್ನು ಲೋಕಾರ್ಪಣೆಗೊಳಿಸಿ ಮಾತನಾಡಿದ ಅವರು, ಬರಹಗಾರನು ಪೂರ್ವಾಗ್ರಹ ಪೀಡಿತನಾದಂತೆ ಬರೆಯಬಾರದು. ತನ್ನ ಬರವಣಿಗೆಯಲ್ಲಿ ಜಾತ್ಯತೀತ ನಿಲುವುಗಳನ್ನು ಇರಿಸಿಕೊಳ್ಳಬೇಕು. ಈ ನಿಟ್ಟಿನಲ್ಲಿ ಸಾಹಿತಿ ಡಾ.ಬೈರಮಂಗಲ ರಾಮೇಗೌಡ ಅವರು ತಮ್ಮ ಪುಸ್ತಕದಲ್ಲಿ ವಿವರಿಸಿದ್ದಾರೆ ಎಂದು ಹೇಳಿದರು.

ಕೆಪಿಎನ್ ಚಿತ್ರ



> ವಿಚಾರ ಕ್ರಾಂತಿಗಳನ್ನು ಯುವಕರಲ್ಲಿ ಬಿತ್ತಿ, ರಾಜಕೀಯವಾಗಿ ಬದಲಾವಣೆ ತರುವತ್ತ ಗಮನಹರಿಸಬೇಕು.
>
> ▫ ಎಚ್.ಎಸ್. ದೊರೆಸ್ವಾಮಿ, ಸ್ವಾತಂತ್ರ್ಯ ಹೋರಾಟಗಾರ.

ಓದುಗನ ಮನಸ್ಸಿನಲ್ಲಿರುವ ತುಡಿತ ಡಾ.ಬೈರಮಂಗಲ ರಾಮೇಗೌಡ ಅವರಿಗೆ ತಿಳಿದಿತ್ತು.

ಇದಕ್ಕೆ ತಕ್ಕಂತೆ ಅವರು ಪುಸ್ತಕಗಳನ್ನು ಬರೆಯುತ್ತಿದ್ದರು. ಅವರು ಓರ್ವ ವಿಮರ್ಶಕರಾಗಿ ಬರೆಯುತ್ತಿದ್ದು, ಅವರ ಬರಹಗಳು ಓದುಗರನ್ನು ಆಕರ್ಷಿಸುವಂತಿತ್ತು ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ ಅವರನ್ನು ಸನ್ಮಾನಿಸಲಾಯಿತು.

ಸಂಯುಕ್ತ ಕರ್ನಾಟಕ

ಮಂಗಳವಾರ, 27, ಜೂನ್, 2017, ಬೆಂಗಳೂರು

# ಮಾದಕವಸ್ತುಗಳ ದುಷ್ಪರಿಣಾಮದ ಅರಿವು ಅವಶ್ಯ

ಬೆಂಗಳೂರು: ಮಕ್ಕಳಿಗೆ ಮಾದಕವಸ್ತುಗಳ ವ್ಯಸನದಿಂದಾಗುವ ದುಷ್ಪರಿಣಾಮಗಳ ಬಗ್ಗೆ ಪಠ್ಯಪುಸ್ತಕಗಳಲ್ಲಿ ಅಳವಡಿಸಲು ಶಿಕ್ಷಣ ಇಲಾಖೆಯೊಂದಿಗೆ ಚರ್ಚಿಸಿ ನಿರ್ಣಯ ಕೈಗೊಳ್ಳಲಾಗುವುದು ಎಂದು ಕೆಪಿಸಿಸಿ ಕಾರ್ಯಾಧ್ಯಕ್ಷ ದಿನೇಶ್ ಗುಂಡೂರಾವ್ ತಿಳಿಸಿದರು.

ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಹಾಗೂ ರಾಷ್ಟ್ರೀಯ ಸೇವಾ ಯೋಜನೆ ಆಶ್ರಯದಿಂದ ಗಾಂಧಿ ಭವನದಲ್ಲಿ ಆಯೋಜಿಸಿದ್ದ 'ವಿಶ್ವ ಮಾದಕ ವಸ್ತು ವಿರೋಧಿ ಸಪ್ತಾಹ' ಸಮಾರಂಭಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು.

ಮಾದಕವಸ್ತುಗಳ ಸೇವನೆಯಿಂದಾಗುವ ಕೆಟ್ಟ ಪರಿಣಾಮಗಳ ಬಗ್ಗೆ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣದಲ್ಲೇ ವಿದ್ಯಾರ್ಥಿಗಳು ತಿಳಿದುಕೊಂಡರೆ, ಮುಂದೆ ಅಂತಹ ವಸ್ತುಗಳಿಂದ ದೂರವಿರುತ್ತಾರೆ.

ಶಿಕ್ಷಣದ ಮೂಲಕವೇ ಮಾದಕ ವಸ್ತುಗಳಿಂದ ನಮ್ಮ ಯುವಕರನ್ನು ತಪ್ಪಿಸಲು ಸಾಧ್ಯ ಎಂದರು.

15 ರಿಂದ 25 ವರ್ಷದೊಳಗಿನ ಮಕ್ಕಳೇ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಮಾದಕ ವಸ್ತುಗಳಿಗೆ ಬಲಿಯಾಗುತ್ತಿರುವುದು ಆತಂಕ ಉಂಟು ಮಾಡುತ್ತಿದೆ. ಮಕ್ಕಳಲ್ಲಿ ಮಾದಕ ವಸ್ತುಗಳ ಬಗೆಗಿನ ಕುತೂಹಲವೇ ಅವರನ್ನು ವ್ಯಸನಿಗಳನ್ನಾಗಿಸುತ್ತಿದೆ. ಸರಿಯಾದ ಸಮಯದಲ್ಲಿ ಅವರಿಗೆ ಮಾದಕ ವಸ್ತುಗಳ ಸೇವನೆಯಿಂದ ಆರೋಗ್ಯಕ್ಕೆ ಏನೆಲ್ಲಾ ತೊಂದರೆಗಳಾಗುತ್ತವೆ ತಿಳಿಸಿದರೆ ಅವುಗಳ ಸಹವಾಸಕ್ಕೆ ಹೋಗಲ್ಲ. ಅವರಿಗೆ ಆ ವಿಚಾರವನ್ನು ತಿಳಿಸಿಕೊಡುವುದು ಸಮಾಜದ ಜವಾಬ್ದಾರಿ ಎಂದು ಹೇಳಿದರು.

ನಿಮ್ಹಾನ್ಸ್ ಆಸ್ಪತ್ರೆಯ ಮನೋವೈದ್ಯ ಡಾ.ಪ್ರತಿಮಾ ಮೂರ್ತಿ ಮಾತನಾಡಿ, ಇತ್ತೀಚಿನ ದಿನಗಳಲ್ಲಿ ನಿಷೇಧಿಸಲಾದ ಮಾದಕ ವಸ್ತುಗಳಿಗಿಂತ ಜನರು ಔಷಧ ವಸ್ತುಗಳನ್ನೇ ಮಾದಕ ವಸ್ತುಗಳಂತೆ ಸೇವಿಸುತ್ತಿರುವುದು ಆಘಾತಕಾರಿ ಬೆಳವಣಿಗೆಯಾಗಿದೆ. 100 ಜನರಲ್ಲಿ 18 ರಿಂದ 20ರಷ್ಟು ಜನರು ಪ್ರತಿನಿತ್ಯ ನಿದ್ದೆ ಬಾರದೆ ಇದ್ದರೆ, ಒತ್ತಡ ಕಡಿಮೆ ಮಾಡಿಕೊಳ್ಳಲು ವೈದ್ಯರ ಸಲಹೆ ಇಲ್ಲದೇ ಮಾತ್ರೆಗಳನ್ನು ಸೇವಿಸುತ್ತಿರುವುದು ಕೂಡ ಒಂದು ವ್ಯಸನವೆಂದು ವೈದ್ಯ ಕ್ಷೇತ್ರ ಗುರುತಿಸುತ್ತದೆ. ಅಂತಹ ವ್ಯಕ್ತಿಗಳಿಗೆ ತಾವು ಕೂಡ ಮಾದಕ ವಸ್ತುಗಳ ಚಟದ ದಾಸರಾಗುತ್ತಿದ್ದೇವೆ ಎಂದು ಅರ್ಥವಾಗದಿರುವುದು ಮತ್ತೊಂದು ದುರಂತ ಎಂದು ಕಳವಳ ವ್ಯಕ್ತಪಡಿಸಿದರು.

ಕರ್ನಾಟಕ ಮಾಧ್ಯಮ ಅಕಾಡೆಮಿ ಅಧ್ಯಕ್ಷ ಎಂ.ಸಿದ್ಧರಾಜು, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ.ಕೃಷ್ಣ, ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಅಧ್ಯಕ್ಷ ಎಚ್.ಎಸ್.ರುದ್ರಪ್ಪ ಮತ್ತಿತರರು ಉಪಸ್ಥಿತರಿದ್ದರು. ವಿಶ್ವ ಮಾದಕ ವಸ್ತು ವಿರೋಧಿ ಸಪ್ತಾಹದ ಅಂಗವಾಗಿ ಮೌರ್ಯ ಹೋಟೆಲ್ ವೃತ್ತದಿಂದ ಗಾಂಧಿ ಭವನದವರೆಗೆ ಹಮ್ಮಿಕೊಳ್ಳಲಾಗಿದ್ದ ಜಾಗೃತಿ ಜಾಥಾಕ್ಕೆ ನಟ ಚೇತನ ಚಾಲನೆ ನೀಡಿದರು. ಸುಮಾರು 200 ಶಾಲಾ ವಿದ್ಯಾರ್ಥಿಗಳು ಮೆರವಣಿಗೆಯಲ್ಲಿ ಭಾಗವಹಿಸಿದ್ದರು.



ರಾಜ್ಯ ಮದ್ಯಪಾನ ಸಂಯಮ ಮಂಡಳಿ, ಗಾಂಧಿ ಸ್ಮಾರಕ ನಿಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಹಾಗೂ ರಾಷ್ಟ್ರೀಯ ಸೇವಾ ಯೋಜನೆ ಆಶ್ರಯದಿಂದ ಗಾಂಧಿಭವನದಲ್ಲಿ ಆಯೋಜಿಸಿದ್ದ ವಿಶ್ವ ಮಾದಕ ವಸ್ತು ವಿರೋಧಿ ಸಪ್ತಾಹದಲ್ಲಿ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಮದ್ಯಪಾನ ಸಂಯಮ ಮಂಡಳಿ ಅಧ್ಯಕ್ಷ ಎಚ್.ಸಿ.ರುದ್ರಪ್ಪ, ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷ ಎಚ್.ಕಾಂತರಾಜ ಭಾಗವಹಿಸಿದ್ದರು.

> "ಮದ್ಯಪಾನ ನಿಷೇಧಿಸಿದರೆ ಸರ್ಕಾರ ನಡೆಸುವುದು ಅಸಾಧ್ಯ ಎಂಬ ಭಯ ಅನೇಕ ರಾಜ್ಯಗಳಿಗೆ ಇರುವುದು ನಮ್ಮ ದೇಶದ ದುರಂತ
> — ಎಚ್. ಕಾಂತರಾಜು, ಅಧ್ಯಕ್ಷರು, ರಾಜ್ಯ ಹಿಂದುಳಿದ ವರ್ಗಗಳ ಆಯೋಗ

> "ಮಕ್ಕಳಿಗೆ ಕುಡಿತ ಹಾಗೂ ತಂಬಾಕು ಸೇವನೆ ದುಷ್ಪರಿಣಾಮಗಳ ಬಗ್ಗೆ ಅರಿವು ಮೂಡಿಸುವುದು ತುಂಬಾ ಅಗತ್ಯವಾಗಿದ್ದು ರಾಜ್ಯ ಮದ್ಯಪಾನ ಸಂಯಮ ಮಂಡಳಿ ಈ ನಿಟ್ಟಿನಲ್ಲಿ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುತ್ತಿದೆ
> — ಡಾ. ವೂಡೇ ಪಿ.ಕೃಷ್ಣ, ಅಧ್ಯಕ್ಷರು, ಕರ್ನಾಟಕ ಗಾಂಧೀ ಸ್ಮಾರಕ ನಿಧಿ

ಹೊಸ ದಿಗಂತ

ಮಂಗಳವಾರ
27 ಜೂನ್ 2017

## ವಿದ್ಯಾರ್ಥಿಗಳಿಗೆ ಅರಿವು ಮೂಡಿಸಿ: ದಿನೇಶ್ ಗುಂಡೂರಾವ್

# ಪಠ್ಯದಲ್ಲಿ ದುಶ್ಚಟ ಕುರಿತು ಜಾಗೃತಿ

▸ ದಿಗಂತ ವರದಿ: ಬೆಂಗಳೂರು, ಜೂ.26

ಪಠ್ಯಪುಸ್ತಕಗಳಲ್ಲಿ ಮಾದಕ ವಸ್ತುಗಳಿಂದ ಆಗುವ ದುಷ್ಪರಿಣಾಮಗಳ ಕುರಿತು ಒಂದು ವಿಷಯ ಸೇರಿಸಬೇಕು. ಅದರಿಂದ ವಿದ್ಯಾರ್ಥಿ ಜೀವನದಲ್ಲೇ ಮದ್ಯಪಾನದ ಬಗ್ಗೆ ಜಾಗೃತಿ ಮೂಡಿಸಿದಂತಾಗುತ್ತದೆ. ಮುಂಬರುವ ದಿನಗಳಲ್ಲಿ ಪಠ್ಯಪುಸ್ತಕದಲ್ಲಿ ಸೇರಿಸಲು ಒತ್ತಾಯಿಸಲಾಗುವುದು ಎಂದು ಕೆಪಿಸಿಸಿ ಕಾರ್ಯಾಧ್ಯಕ್ಷ ದಿನೇಶ್ ಗುಂಡೂರಾವ್ ಹೇಳಿದರು.

ನಗರದ ಗಾಂಧಿ ಭವನದಲ್ಲಿ ಸೋಮವಾರ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ರಾಷ್ಟ್ರೀಯ ಸೇವಾ ಯೋಜನೆ ಇವರ ಸಂಯುಕ್ತಾಶ್ರಯದಲ್ಲಿ ವಿಶ್ವ ಮಾದಕ ವಸ್ತು ವಿರೋಧಿ ಸಪ್ತಾಹ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

ಮಹಾತ್ಮಾ ಗಾಂಧೀಜಿಯವರು ಸರಳ ವ್ಯಕ್ತಿತ್ವ ಅಳವಡಿಸಿಕೊಂಡು ಇನ್ನೊಬ್ಬರಿಗೆ ಮಾದರಿಯಾಗಿದ್ದರು. ಅವರು ಕೇವಲ ಸ್ವಾತಂತ್ರ್ಯಕ್ಕಾಗಿ ಹೋರಾಡದೆ ಸಮಾಜ ಸುಧಾರಣೆಗೂ ಶ್ರಮಿಸಿದ್ದರು. ಅವರ ತತ್ತ್ವ ಸಿದ್ಧಾಂತಗಳನ್ನು ಎಲ್ಲರೂ ಮೈಗೂಡಿಸಿಕೊಂಡು ಹೋಗಬೇಕು ಎಂದು ಕಿವಿಮಾತು ಹೇಳಿದರು.

ಇತ್ತೀಚೆಗಂತೂ ಮಾದಕ ವಸ್ತುಗಳ ಸೇವನೆ ಮಿತಿಮೀರುತ್ತಿದೆ. ಇದಕ್ಕೆ 25 ವರ್ಷದೊಳಗಿನ ಮಕ್ಕಳೆ ಹೆಚ್ಚು ಬಲಿಯಾಗುತ್ತಿರುವುದು ದುಃಖಕರ ಸಂಗತಿ. ಅಷ್ಟೆ ಅಲ್ಲದೆ, ಇತ್ತೀಚಿನ ದಿನಗಳಲ್ಲಿ ಶಾಲೆ, ಕಾಲೇಜುಗಳಲ್ಲಿ ಗಾಂಜಾ, ಅಫೀಮು ಮುಂತಾದವುಗಳು ಹೆಚ್ಚುತ್ತಿವೆ. ಅದರ ವಿರುದ್ಧ ಜಾಗೃತಿ ಮೂಡಿಸುವುದು ಅವಶ್ಯವಾಗಿದೆ ಎಂದರು.





**ಕ್ಯಾನ್ಸರಿಗೆ ಆಹ್ವಾನ**

**ಮಾದಕ ವಸ್ತುಗಳಲ್ಲಿ ಸುಮಾರು ಮೂರು ಸಾವಿರ ರಾಸಾಯನಿಕಗಳು ಸೇರಿಕೊಂಡಿರುತ್ತದೆ. ಅದರಿಂದ ಹೃದಯ, ಹಲ್ಲು, ಬಾಯಿ, ಲಿವರ್ ಸೇರಿದಂತೆ ತಲೆಯಿಂದ ಕಾಲಿನವರೆಗೂ ಕ್ಯಾನ್ಸರ್ ಬರುವ ಸಾಧ್ಯತೆ ಇದೆ .**

**■ ದಿನೇಶ್ ಗುಂಡೂರಾವ್, ಕೆಪಿಸಿಸಿ ಕಾರ್ಯಾಧ್ಯಕ್ಷ**

ನಿಮ್ಹಾನ್ಸ್ ಆಸ್ಪತ್ರೆಯ ಡಾ. ಪ್ರತಿಮಾ ಮೂರ್ತಿ ಮಾತನಾಡಿ, ಈಗಿರುವ ಮಾದಕ ವಸ್ತುಗಳಲ್ಲಿ ಸುಮಾರು 3 ಸಾವಿರ ರಾಸಾಯನಿಕಗಳು ಸೇರಿಕೊಂಡಿರುತ್ತದೆ. ಅದರಿಂದ ಹೃದಯ, ಹಲ್ಲು, ಬಾಯಿ, ಲಿವರ್ ಸೇರಿದಂತೆ ತಲೆಯಿಂದ ಕಾಲಿನವರೆಗೂ ಕ್ಯಾನ್ಸರ್ ಬರುವ ಸಾಧ್ಯತೆ ಇದೆ ಎಂದು ಹೇಳಿದರು.

ಮಾದಕ ವ್ಯಸನಗಳನ್ನು ಯುವಕರು ಕುತೂಹಲ ಹಾಗೂ ಆಕರ್ಷಣೆಗೊಳಗಾಗಿ ಅಂಟಿಸಿಕೊಳ್ಳುತ್ತಿದ್ದಾರೆ. ಅದು ಮುಂದೆ ಹವ್ಯಾಸವಾಗಿ ಅಭ್ಯಾಸವಾಗಿಬಿಡುತ್ತದೆ. ನಂತರ ಅದೊಂದು ಚಟವಾಗುತ್ತದೆ. ಆಗ ನಾವು ಅದನ್ನು ಬಿಡಲು ಪ್ರಯತ್ನಿಸಿದರೆ ಅದು ನಮ್ಮನ್ನು ಬಿಡುವುದಿಲ್ಲ ಎಂದು ತಿಳಿಸಿದರು.

ಇಂದು ಸೇರಿರುವ, ಶಾಲಾ ಕಾಲೇಜಿನ ಮಕ್ಕಳು ಮದ್ಯ ವ್ಯಸನದ ಬಗ್ಗೆ ತಿಳಿಸಿದ್ದು ಕೊಂಡಿದ್ದಿರಿ. ಎಂದಿಗೂ ಮಾದಕ ವಸ್ತುಗಳನ್ನು ಸೇವಿಸುವುದಿಲ್ಲ ಇಂದು ಎಲ್ಲರೂ ಒಂದು ನಿರ್ಧಾರ ಕೈಗೊಳ್ಳಬೇಕು. ಹಾಗಾದರೆ ಮಾತ್ರ ತಮ್ಮ ಜೀವನ ಉತ್ತಮವಾಗಲು ಸಾಧ್ಯ ಎಂದರು. ಕಾರ್ಯಕ್ರಮ ಆರಂಭಕ್ಕೂ ಮುನ್ನ ನಗರದ ಮೌರ್ಯ ಹೋಟೇಲ್ ವೃತ್ತದಿಂದ ಚಿತ್ರನಟ ಚೇತನ್ ಅವರಿಂದ ಜಾಗೃತಿ ಜಾಥಾ ನಡೆಸಲಾಯಿತು. ರಸ್ತೆಯುದ್ದಕ್ಕೂ ಕುಡಿತದಿಂದ ಏನೇನು ತೊಂದರೆಗಳಾಗುತ್ತಿವೆ ಎಂಬುದನ್ನು ಮಕ್ಕಳು ನಾಟಕ ಮಾಡುವ ಮೂಲಕ ಸಾರ್ವಜನಿಕರಿಗೆ ಜಾಗೃತಿ ಮೂಡಿಸಿದರು. ಇದರಲ್ಲಿ ಎಚ್.ಬಿ.ದಿನೇಶ್, ಜೆ.ಎಚ್. ಕಾಂತರಾಜ್, ನರಸಿಂಹಮೂರ್ತಿ, ಆನೇಕಲ್, ಶ್ರೀಕುಮಾರ್, ಚಂದ್ರಶೇಖರ್, ಪಾಲ್‌ರಾಜ್, ಉಡುಪಿ ಕೃಷ್ಣ ಇದ್ದರು.

ಕರ್ನಾಟಕ ಮಂಗಳವಾರ,27 ಜೂನ್ 2017

## ಸರಕಾರದ ಮಟ್ಟದಲ್ಲಿ ಚರ್ಚೆ: ಸಚಿವ ಗುಂಡೂರಾವ್ ಹೇಳಿಕೆ

# ಪಠ್ಯದಲ್ಲಿ ಮಾದಕ ವಸ್ತುಗಳ ಜಾಗೃತಿ

**ವಿಕ ಸುದ್ದಿಲೋಕ** ಬೆಂಗಳೂರು

ಮಕ್ಕಳು ಮಾದಕ ವ್ಯಸನಕ್ಕೊಳಗಾಗದಂತೆ ಎಚ್ಚರ ವಹಿಸಲು ಶಾಲಾ ಪಠ್ಯಗಳಲ್ಲಿ ಮಾದಕ ವಸ್ತುಗಳ ಅಪಾಯದ ಕುರಿತು ಮಾಹಿತಿ ನೀಡುವಂತ ಸರಕಾರದ ಮಟ್ಟದಲ್ಲಿ ಚರ್ಚಿಸಲಾಗುವುದು ಎಂದು ಶಾಸಕ ದಿನೇಶ್ ಗುಂಡೂರಾವ್ ತಿಳಿಸಿದರು.

### ಮಾದಕ ವಸ್ತು ವಿರೋಧಿ ಸಪ್ತಾಹ ಸಮಾರಂಭ

ವಾರ್ತಾ ಇಲಾಖೆ, ರಾಜ್ಯ ಮದ್ಯಪಾನ ಸಂಯಮ ಮಂಡಳಿ, ರಾಷ್ಟ್ರೀಯ ಸೇವಾ ಯೋಜನೆಯ ಸಹಯೋಗದಲ್ಲಿ ಗಾಂಧಿ ಭವನದಲ್ಲಿ ಸೋಮವಾರ ಆಯೋಜಿಸಿದ್ದ 'ವಿಶ್ವ ಮಾದಕ ವಸ್ತು ವಿರೋಧಿ ಸಪ್ತಾಹ ಸಮಾರಂಭ' ದಲ್ಲಿ ಅವರು ಮಾತನಾಡಿದರು.

''ಹಿಂದೆ ಶಾಲೆ, ಕಾಲೇಜುಗಳಲ್ಲಿ ಸಿಗರೇಟ್, ಕುಡಿತದಂತಹ ಚಟಗಳಿಗೆ ವಿದ್ಯಾರ್ಥಿಗಳು ಬಲಿಯಾಗುತ್ತಿದ್ದರು. ಇಂದು ಶಾಲೆ, ಕಾಲೇಜು ಹಾಗೂ ವಿಶ್ವವಿದ್ಯಾಲಯಗಳಲ್ಲಿ ಗಾಂಜಾ, ಅಫೀಮು ಸೇರಿದಂತೆ ಆಧುನಿಕ ಕಾಲದ ಮಾದಕ ವಸ್ತುಗಳ ಬಳಕೆ ಅವ್ಯಾಹತವಾಗಿ ನಡೆಯುತ್ತಿದೆ. ಚಿಕ್ಕವಯಸ್ಸಿನಲ್ಲೇ ಮಾದಕ ವಸ್ತುಗಳ ಚಟ ಬೆಳೆಸಿಕೊಳ್ಳುವುದರಿಂದ ವಿದ್ಯಾರ್ಥಿಗಳ ಬದುಕು ನರಕವಾಗುತ್ತಿದೆ. ವಿದ್ಯಾರ್ಥಿಗಳಿಗೆ ಶಿಕ್ಷಣದ ಹಂತದಲ್ಲೇ ಈ ಬಗ್ಗೆ ಅರಿವು ಮೂಡಿಸಬೇಕಿದೆ. ಇದಕ್ಕಾಗಿ ಶಾಲಾ ಪಠ್ಯಗಳಲ್ಲಿ ಒಂದು ಅಧ್ಯಾಯವನ್ನು ಮಾದಕ ವಸ್ತುಗಳ ಅಪಾಯದ ಕುರಿತು ಮಾಹಿತಿ ನೀಡಲು ಮೀಸಲಿಡಬೇಕು. ಈ ಬಗ್ಗೆ ಸರಕಾರದ ಮಟ್ಟದಲ್ಲಿ ಚರ್ಚೆ ನಡೆಸಲಾಗುವುದು,'' ಎಂದರು.



ಗಾಂಧಿ ಭವನದಲ್ಲಿ ಸೋಮವಾರ ಆಯೋಜಿಸಿದ್ದ 'ವಿಶ್ವ ಮಾದಕ ವಸ್ತು ವಿರೋಧಿ ಸಪ್ತಾಹ ಸಮಾರಂಭ' ದಲ್ಲಿ, ಶಾಲಾ ಮಕ್ಕಳು ಜಾಗೃತಿ ಜಾಥಾ ನಡೆಸಿದರು.

''ಸಾಮಾನ್ಯವಾಗಿ 25 ವರ್ಷದೊಳಗಿನವರು ಮಾದಕ ವಸ್ತುಗಳಿಗೆ ಬಲಿಯಾಗುತ್ತಿದ್ದಾರೆ. ಆದ್ದರಿಂದ ಶಾಲಾ, ಕಾಲೇಜುಗಳಲ್ಲಿ ಮಾದಕ ವಸ್ತುಗಳನ್ನು ಬಳಸದಂತೆ ಜಾಗೃತಿ ಮೂಡಿಸಬೇಕಿದೆ. ಪ್ರತಿ ವಿದ್ಯಾರ್ಥಿಯು ತನ್ನ ಸ್ನೇಹಿತರು ಮಾದಕ ವಸ್ತುಗಳಿಗೆ ಬಲಿಯಾದಾಗ ಎಚ್ಚರಿಕೆ ನೀಡಬೇಕು. ಆತ ಎಚ್ಚರಿಕೆ ಮಾತು ಕೇಳಲಿಲ್ಲವೆಂದರೆ, ಹಿರಿಯರಿಗೆ ಅಥವಾ ಶಿಕ್ಷಕರಿಗೆ ಮಾಹಿತಿ ನೀಡಬೇಕು,'' ಎಂದು ಕಿವಿಮಾತು ಹೇಳಿದರು.

ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷ ಎಚ್.ಕಾಂತರಾಜು ಮಾತನಾಡಿ, ''ಮಕ್ಕಳು ದೊಡ್ಡವರಾಗುತ್ತಿದ್ದಂತೆ ತಪ್ಪುಗಳನ್ನು ಮಾಡಲು ಆರಂಭಿಸುತ್ತಾರೆ. ಆದರೆ ಮಾದಕ ವಸ್ತುಗಳಿಗೆ ಬಲಿಯಾಗುವಂತಹ ತಪ್ಪನ್ನು ಎಂದಿಗೂ ಮಾಡಬಾರದು. ನಾನು ವಕೀಲ ವೃತ್ತಿ ಮಾಡುತ್ತಿದ್ದಾಗ, ಅನೇಕ ಸ್ನೇಹಿತರು ಧೂಮಪಾನ ಮಾಡುವಂತೆ ಒತ್ತಾಯಿಸುತ್ತಿದ್ದರು. ಒಮ್ಮೆ ಕೋಣೆಯೊಂದರಲ್ಲಿ ಕೂಡಿಹಾಕಿ ಧೂಮಪಾನ ಮಾಡುವಂತೆ ಒತ್ತಡ ಹೇರಿದರು. ಆದರೆ ನಾನು ಸ್ನೇಹಿತರಿಗೆ ಬುದ್ಧಿವಾದ ಹೇಳಿ ಇನ್ನು ಮುಂದೆ ಹೀಗೆ ಮಾಡದಂತೆ ಎಚ್ಚರಿಕೆ ನೀಡಿದೆ. ಶಾಲೆಯಲ್ಲಿ ಮಕ್ಕಳಿಗೆ ಬೇರೆಯವರು ಹೀಗೆ ಒತ್ತಡ ಹೇರುವಂತಹ ಸನ್ನಿವೇಶಗಳು ಬರಬಹುದು. ಆದರೆ ಮಕ್ಕಳು ಮಾನಸಿಕ ಶಕ್ತಿಯಿಂದ ಇಂತಹ ಸಮಸ್ಯೆಯಿಂದ ಪಾರಾಗಬೇಕು,'' ಎಂದರು.

ಇದಕ್ಕೂ ಮುನ್ನ ಆನಂದ ರಾವ್ ವೃತ್ತದಿಂದ ಗಾಂಧಿಭವನದವರೆಗೆ ಜಾಗೃತಿ ಜಾಥಾ ನಡೆಯಿತು. ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ.ಕೃಷ್ಣ, ಮಂಡಳಿ ಅಧ್ಯಕ್ಷ ಎಚ್.ಸಿ.ರುದ್ರಪ್ಪ, ಮಾಧ್ಯಮ ಅಕಾಡೆಮಿ ಅಧ್ಯಕ್ಷ ಎಂ.ಸಿದ್ದರಾಜು, ನಿಮ್ಹಾನ್ಸ್‌ನ ಡಾ.ಪ್ರತಿಮಾ ಮೂರ್ತಿ ಹಾಜರಿದ್ದರು.

ಉದಯವಾಣಿ

ಮಂಗಳವಾರ, ಜೂನ್ 27, 2017



ಗಾಂಧಿಭವನದ ಎದುರು ವಿಶ್ವ ಮಾದಕ ವಸ್ತುಗಳ ವಿರೋಧಿ ಸಪ್ತಾಹದ ಪ್ರಯುಕ್ತ ಗಾಂಧಿಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೆ ಪಿ. ಕೃಷ್ಣ ಮತ್ತು ಇತರರು ಸೋಮವಾರ ಜಾಗೃತಿಜಾಥಾ ನಡೆಸಿದರು.

ಕನ್ನಡಪ್ರಭ

ಮಂಗಳವಾರ 27.6.2017



ರಾಜ್ಯ ಮದ್ಯಪಾನ ಸಂಯಮ ಮಂಡಳಿಯು ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ಹಮ್ಮಿಕೊಂಡಿದ್ದ ವಿಶ್ವ ಮಾದಕ ವಸ್ತು ವಿರೋಧಿ ಸಪ್ತಾಹದ ಜಾಗೃತಿ ಜಾಥಾಕ್ಕೆ ನಟ ಚೇತನ್ ಚಾಲನೆ ನೀಡಿದರು. ಗಾಂಧಿ ವೇಷಧಾರಿ, ವಿದ್ಯಾರ್ಥಿಗಳು ಭಾಗವಹಿಸಿದ್ದರು.

ಮಾದಕ ವಸ್ತು ವಿರೋಧಿ ಸಪ್ತಾಹ....

# ಮಾದಕ ವಸ್ತು ವಿರೋಧಿ ಸಪ್ತಾಹ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಮದ್ಯಪಾನ ಸೇವನೆಯಿಂದಾಗುವ ಅನಾಹುತಗಳ ಕುರಿತುಪಠ್ಯದಲ್ಲಿಒಂದುವಿಷಯವನ್ನಾಗಿಅಳವಡಿಸಿ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸಬೇಕೆಂದು ಶಾಸಕ, ಕೆಪಿಸಿಸಿ ಕಾರ್ಯಾಧ್ಯಕ್ಷ ದಿನೇಶ್ ಗುಂಡೂರಾವ್ ಅಭಿಪ್ರಾಯ ಪಟ್ಟಿದ್ದಾರೆ.

ರಾಜ್ಯ ಮದ್ಯಪಾನ ಸಂಯಮ ಮಂಡಳಿಯು ಗಾಂಧಿಸ್ಮಾರಕನಿಧಿಸಹಯೋಗದಲ್ಲಿಸೋಮವಾರ ಹಮ್ಮಿಕೊಂಡಿದ್ದ ವಿಶ್ವ ಮಾದಕ ವಸ್ತು ವಿರೋಧಿ ಸಪ್ತಾಹ ಉದ್ಘಾಟಿಸಿ ಮಾತನಾಡಿದರು. ಇದಕ್ಕೂ ಮುನ್ನ ಮೌರ್ಯ ಹೋಟೆಲ್ ವೃತ್ತದ ಗಾಂಧಿ ಪ್ರತಿಮೆಯಿಂದ ಕುಮಾರ್ ಪಾರ್ಕ್ ಗಾಂಧಿ ಭವನ ದವರೆಗೆ ನಡೆದ ಜಾಗೃತಿ ಜಾಥಾಕ್ಕೆ ಚಲನಚಿತ್ರ ನಟ ಚೇತನ್ ಚಾಲನೆನೀಡಿದರು. ಹಿಂದುಳಿದವರ್ಗಗಳ ಆಯೋಗದ ಅಧ್ಯಕ್ಷ ಎಚ್.ಕಾಂತರಾಜು, ಗಾಂಧಿ ಸ್ಮಾರಕನಿಧಿಅಧ್ಯಕ್ಷಡಾ.ವೂಡೆಪಿ.ಕೃಷ್ಣ,ನಿಮ್ಹಾನ್ಸ್‌ನ ಮನೋವೈದ್ಯೆ ಪ್ರತಿಮಾಮೂರ್ತಿ, ಮಾಧ್ಯಮ ಅಕಾಡೆಮಿ ಅಧ್ಯಕ್ಷ ಎಂ.ಸಿದ್ದರಾಜು, ರಾಜ್ಯ ಮದ್ಯಪಾನ ಸಂಯಮ ಮಂಡಳಿ ಅಧ್ಯಕ್ಷ ಎಚ್.ಸಿ.ರುದ್ರಪ್ಪ, ಕಾರ್ಯದರ್ಶಿ ವಿ.ಪಾತರಾಜು ಮತ್ತಿತರರಿದ್ದರು.

ಈ ಸಂಜೆ

ಸೋಮವಾರ, 26-6-2017





**ಕುಡಿತ ಬೇಡ....** ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ನಗರದಲ್ಲಿಂದು ಹಮ್ಮಿಕೊಂಡಿದ್ದ ವಿಶ್ವ ಮಾದಕ ವಸ್ತು ವಿರೋಧಿ ಸಪ್ತಾಹ ಅಂಗವಾಗಿ ಮಂಡಳಿ ಅಧ್ಯಕ್ಷ ಎಸ್.ಪಿ. ರುದ್ರಪ್ಪ, ಗಾಂಧಿ ಭವನದ ಅಧ್ಯಕ್ಷ ವೂಡೆ ಪಿ. ಕೃಷ್ಣ ಸೇರಿದಂತೆ ವಿದ್ಯಾರ್ಥಿಗಳು ಪಾಲ್ಗೊಂಡು ಮದ್ಯಪಾನ ಆರೋಗ್ಯಕ್ಕೆ ಹಾನಿಕರ ಎಂಬ ಕುರಿತು ಜಾಗೃತಿ ಮೂಡಿಸಿದರು.

ಉದಯವಾಣಿ ಬೆಂಗಳೂರು
ಗುರುವಾರ | ಜೂನ್ | 22 | 2017

ಅಣ್ಣಾ ನುಡಿ

# ಭ್ರಷ್ಟಾಚಾರದ ವಿರುದ್ಧ ದೇಶದಲ್ಲಿ ನಡೆಯಬೇಕಿದೆ ಜನಾಂದೋಲನ

## ಗ್ರಾಮೀಣಾಭಿವೃದ್ಧಿ ಮೂಲಕ ದೇಶದ ಪ್ರಗತಿ ಸಾಧ್ಯ ಎಂದ ಅಣ್ಣಾ ಹಜಾರೆ

ಬೆಂಗಳೂರು: 'ದೇಶವನ್ನು ಭ್ರಷ್ಟಾಚಾರದಿಂದ ಮುಕ್ತಿಗೊಳಿಸಲು ಮತ್ತು ಗ್ರಾಮೀಣಾಭಿವೃದ್ಧಿಗಾಗಿ ನಿರಂತರ ಆಂದೋಲನಗಳಾಗಬೇಕು. ಆಂದೋಲನದಲ್ಲಿ ದೇಶದ ಯುವಶಕ್ತಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಬೇಕು,' ಎಂದು ಸಾಮಾಜಿಕ ಕಾರ್ಯಕರ್ತ ಅಣ್ಣಾ ಹಜಾರೆ ಅಭಿಪ್ರಾಯಪಟ್ಟರು.

ಬುಧವಾರ ಯಲಹಂಕ ಉಪನಗರದ ಶೇಷಾದ್ರಿಪುರ ಪಿಯು ಕಾಲೇಜಿನ 25ನೇ ವಾರ್ಷಿಕೋತ್ಸವ ಸಮಾರಂಭದಲ್ಲಿ 'ಗಾಂಧಿ ಅಧ್ಯಯನ ಕೇಂದ್ರ' ಉದ್ಘಾಟಿಸಿ ಮಾತನಾಡಿದ ಅವರು, 'ದೇಶದಲ್ಲಿ ನ್ಯಾಯಯುತವಾದ ಬದಲಾವಣೆ ತರಬೇಕಾದರೆ ಮೊದಲು ಭ್ರಷ್ಟಾಚಾರ ಮತ್ತು ಗ್ರಾಮೀಣ ಅಭಿವೃದ್ಧಿಗಾಗಿ ಆಂದೋಲನ ನಡೆಯಬೇಕು. ದೇಶದ ಅಭಿವೃದ್ಧಿಯಲ್ಲಿ ಯುವಕರ ಪಾತ್ರ ಮುಖ್ಯವಾಗಿದ್ದು, ಭ್ರಷ್ಟಾಚಾರ ನಿರ್ಮೂಲನೆ ಹಾಗೂ ಗಾಂಧೀಜಿಯವರ ಕನಸಾದ ಗ್ರಾಮಗಳ ಅಭಿವೃದ್ಧಿಯ ಕಡೆಗೆ ಯುವಕರು ಹೆಚ್ಚಿನ ಆದ್ಯತೆ ನೀಡಬೇಕು. ಆ ಮೂಲಕ ದೇಶದ ಅಭಿವೃದ್ಧಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು,' ಎಂದು ಸಲಹೆ ನೀಡಿದರು.

'ಪ್ರತಿಯೊಬ್ಬರೂ ಜೀವನದಲ್ಲಿ ಒಂದು ನಿರ್ದಿಷ್ಟ ಗುರಿ ಹೊಂದಬೇಕು. ಅದರ ಸಾಕಾರಕ್ಕಾಗಿ ನಿರಂತರವಾಗಿ ಶ್ರಮವಹಿಸಿದಾಗ ಮಾತ್ರ ಜೀವನದಲ್ಲಿ ಏನನ್ನಾದರು ಸಾಧಿಸಬಹುದು. ಸ್ವಾರ್ಥ ಭಾವನೆ ಬಿಟ್ಟು ಸಮಾಜದ ಬದಲಾವಣೆಗೆ ಕೆಲಸ ಮಾಡಲು ಮುಂದಾದಾಗ ಉತ್ತಮ ಸಮಾಜವನ್ನು ನಿರ್ಮಿಸಬಹುದು,' ಎಂದು ಅವರು ಹೇಳಿದರು.



ಯಲಹಂಕ ಉಪನಗರದ ಶೇಷಾದ್ರಿಪುರ ಪಿಯು ಕಾಲೇಜಿನ 25ನೇ ವಾರ್ಷಿಕೋತ್ಸವ ಸಮಾರಂಭದಲ್ಲಿ ಗಾಂಧಿ ಪುತ್ಥಳಿಗೆ ಪುಷ್ಪಾರ್ಚನೆ ಮಾಡುವ ಮೂಲಕ 'ಗಾಂಧಿ ಅಧ್ಯಯನ ಕೇಂದ್ರ' ಉದ್ಘಾಟಿಸಿದ ಸಮಾಜಿಕ ಹೋರಾಟಗಾರ ಅಣ್ಣಾ ಹಜಾರೆ.

'ಮನುಷ್ಯನ ದುರಾಸೆಯಿಂದಾಗಿ ದೇಶದ ಅರಣ್ಯ ಸಂಪತ್ತು ನಾಶವಾಗುತ್ತಿದೆ. ಪರಿಣಾಮ ಹವಾಮಾನವೈಪರಿತ್ಯಗಳು ಕಾಣಿಸಿಕೊಳ್ಳುತ್ತಿವೆ. ಜನರು ವಿವಿಧ ಕಾಯಿಲೆಗಳಿಗೆ ತುತ್ತಾಗುತ್ತಿದ್ದಾರೆ. ಇಂತಹ ಅನಾಹುತಗಳಿಂದ ತಪ್ಪಿಸಿಕೊಳ್ಳಬೇಕಾದರೆ ಪ್ರತಿಯೊಬ್ಬರು ಸಸಿಗಳನ್ನು ನೆಟ್ಟು, ಬೆಳಸುವ ಪ್ರವೃತ್ತಿ ಬೆಳೆಸಿಕೊಳ್ಳಬೇಕು,' ಎಂದು ಕರೆ ನೀಡಿದರು.

'ಹಣವಂತರಿಗೆ ಸಂತೋಷ ಎಲ್ಲಿದೆ ಎಂಬುದು ತಿಳಿಯದೆ ಎಲ್ಲೆಲ್ಲೋ ಹುಡುಕುತ್ತಾರೆ. ಆದರೆ, ಯಾವುದೇ ಆಸೆಯಿಲ್ಲದೆ ಮಾಡುವ ಸಮಾಜ ಸೇವೆಯಲ್ಲಿಯಲ್ಲಿ ನಿಜವಾದ ಸಂತೋಷವಿರುತ್ತದೆ. ಹೀಗಾಗಿ ಮೊದಲು ನಮ್ಮೊಳಗೆ ಇರುವ ಸಂತೋಷವನ್ನು ನಾವು ಕಂಡುಕೊಳ್ಳಬೇಕು. ನಮ್ಮನ್ನು ನಿಂದಿಸುವವರಿಗೆ ಶಬ್ದಗಳ ಬದಲಿಗೆ, ನಮ್ಮ ಕೃತಿಯ ಮೂಲಕ ಉತ್ತರಿಸಬೇಕು,' ಎಂದು ಅಣ್ಣಾ ಹಜಾರೆ ಹೇಳಿದರು.

ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ, ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಕಾಲೇಜಿನ ಪ್ರಾಂಶುಪಾಲ ಪ್ರೊ.ಟಿ.ದೊಡ್ಡೇಗೌಡ, ಗವರ್ನಿಂಗ್ ಕೌನ್ಸಿಲ್ ಅಧ್ಯಕ್ಷ ಎಂ.ಗೋಪಾಲ್ ಸೇರಿದಂತೆ ಪ್ರಮುಖರು ಹಾಜರಿದ್ದರು.

# ಭ್ರಷ್ಟಾಚಾರ ನಿರ್ಮೂಲನೆಗೆ ಪಣತೊಡಿ

- ಅಣ್ಣಾಹಜಾರೆ ಸಲಹೆ
- ಯುವಕರು ರಾಷ್ಟ್ರದ ಶಕ್ತಿ



ಯಲಹಂಕ ಉಪನಗರದ ಶೇಷಾದ್ರಿಪುರಂ ಕಾಲೇಜಿನ 25ನೇ ರಜತ ಮಹೋತ್ಸವ ಕಾರ್ಯಕ್ರಮ ಉದ್ಘಾಟನೆಗೆ ಆಗಮಿಸಿದ ಸಾಮಾಜಿಕ ಕಾರ್ಯಕರ್ತ ಅಣ್ಣಾ ಹಜಾರೆ ಕಾಲೇಜಿನ ವಿದ್ಯಾರ್ಥಿಗಳೊಂದಿಗೆ ಸಂವಾದ ನಡೆಸಿದರು.

**ಯಲಹಂಕ:** ಯುವಕರಿಂದ ಸಮಾಜಸೇವೆ ಅಗತ್ಯವಾಗಿದ್ದು, ಹಳ್ಳಿಗಳು . ಮಾದರಿ ಗ್ರಾಮಗಳಾಗಬೇಕು. ಭ್ರಷ್ಟಾಚಾರ ನಿರ್ಮೂಲನೆಗೆ ಆಂದೋಲನ ಕೈಗೊಳ್ಳಬೇಕೆಂದು ಸಾಮಾಜಿಕ ಕಾರ್ಯಕರ್ತ ಅಣ್ಣಾ ಹಜಾರೆ ಹೇಳಿದರು.

ಯಲಹಂಕ ಉಪನಗರದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನಲ್ಲಿ ಆಯೋಜಿಸಲಾಗಿದ್ದ 25ನೇ ರಜತ ಮಹೋತ್ಸವ ಕಾರ್ಯಕ್ರಮವನ್ನು ಹಾಗೂ ಗಾಂಧಿ ಅಧ್ಯಯನ ಕೇಂದ್ರವನ್ನು ಉದ್ಘಾಟಿಸಿ ಮಾತನಾಡಿದ ಅವರು, ಯುವಕರು ರಾಷ್ಟ್ರದ ಶಕ್ತಿ. ಎಂದಿಗೂ ದುಶ್ಚಟಗಳಿಗೆ ಬಲಿಯಾಗಬಾರದು. ಸಮಾಜಸೇವೆ ಮಾಡುವುದರಿಂದ ಸಂತೋಷ ಸಿಗುತ್ತದೆ. ಗ್ರಾಮ, ಸಮಾಜ, ರಾಷ್ಟ್ರ ಸೇವೆ ಮಾಡುವುದೇ ಒಂದು ಉತ್ತಮವಾದ ಕೆಲಸ ಎಂದು ಹೇಳಿದರು. ಶುದ್ಧ ಆಚಾರ-ವಿಚಾರ, ನಿಷ್ಕಲ್ಮಶ ಜೀವನ, ಸ್ವಲ್ಪ ತ್ಯಾಗ ಈ ನಾಲ್ಕು ತತ್ವಗಳನ್ನು ಯುವಕರುಅಳವಡಿಸಿಕೊಳ್ಳಬೇಕು. ವಿದ್ಯಾರ್ಥಿಗಳು ಗಾಂಧೀಜಿಯವರ ತತ್ವಗಳನ್ನು ಅಳವಡಿಸಿ ಕೊಳ್ಳುವುದರಿಂದ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಸಿಗಲಿದೆ ಎಂದರು. ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ.ವುಡೇ ಪಿ ಕೃಷ್ಣ ಮಾತನಾಡಿದರು. ಪ್ರತಿಭಾವಂತ ವಿದ್ಯಾರ್ಥಿ ಗಳಾದ ಶ್ರೀನಿಧಿ ನಾಯಕ್, ಚೇತನಾ ಎಸ್, ಶಿಲ್ಪ, ಶ್ರೀಚಂದನಗೆ ಗೌರವಿಸಲಾಯಿತು. ಈ ಸಂದರ್ಭದಲ್ಲಿ ರಜತ ಸಂಚಾಯಿನಿ ಬೆಳ್ಳಿಹೆಜ್ಜೆ ನಿಯತಕಾಲಿಕೆಯನ್ನು ಬಿಡುಗಡೆ ಮಾಡಲಾಯಿತು.

ಕನ್ನಡಪ್ರಭ
ಗುರುವಾರ 22.6.2017

# ಯುವಶಕ್ತಿ ಒಗ್ಗೂಡಬೇಕು



ಬುಧವಾರ ನಡೆದ ಯಲಹಂಕ ಉಪನಗರದ ಶೇಷಾದ್ರಿಪುರ ಪಿಯು ಕಾಲೇಜಿನ ಬೆಳ್ಳಿ ಮಹೋತ್ಸವ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಗಾಂಧಿವಾದಿ ಅಣ್ಣಾ ಹಜಾರೆ ಅವರು ಕಾಲೇಜಿನ ವಿದ್ಯಾರ್ಥಿಗಳೊಂದಿಗೆ ಚರ್ಚಿಸಿದರು.

## ವಿದ್ಯಾರ್ಥಿಗಳ ಜತೆ ಮಾತುಕತೆ

ಬೆಂಗಳೂರು: ದೇಶವನ್ನು ಬಲಿಷ್ಠ ರಾಷ್ಟವನ್ನಾಗಿಸ ಬೇಕಾದರೆ ಭ್ರಷ್ಟಾಚಾರ ನಿರ್ಮೂಲನೆ ಮತ್ತು ಗ್ರಾಮೀಣಾಭಿವೃದ್ಧಿಗಾಗಿ ಆಂದೋಲನ ಮಾಡಲು ಯುವ ಶಕ್ತಿ ಒಗ್ಗೂಡಬೇಕು ಎಂದು ಸಾಮಾಜಿಕ ಕಾರ್ಯಕರ್ತ ಅಣ್ಣಾ ಹಜಾರೆ ಕರೆ ನೀಡಿದ್ದಾರೆ. ಯಲಹಂಕ ಉಪನಗರದ ಶೇಷಾದ್ರಿಪುರ ಪಿಯು ಕಾಲೇಜಿನ ಬೆಳ್ಳಿ ಮಹೋತ್ಸವದಲ್ಲಿ ಪಾಲ್ಗೊಂಡು ಮಾತನಾಡಿದ ಅವರ, ದೇಶದ ಅಭಿವೃದ್ಧಿಯಲ್ಲಿ ಯುವ ಶಕ್ತಿಯ ಪಾತ್ರ ಬಹಳ ಮುಖ್ಯವಾಗಿದೆ. ಭ್ರಷ್ಟಾಚಾರ ನಿರ್ಮೂಲನೆಗೆ ದೊಡ್ಡ ಮಟ್ಟದ ಆಂದೋಲನ ನಡೆಯಬೇಕು. ಗ್ರಾಮಗಳ ಅಭಿವೃದ್ಧಿ ನಡೆಯಬೇಕಿದೆ. ಈ ಎಲ್ಲ ಹೋರಾಟಗಳಿಗೂ ಯುವಕರು ಒಗ್ಗೂಡಬೇಕು. ಇರುವಷ್ಟು ದಿನ ನಾವು ಆಸ್ತಿ ಮಾಡುವ ಬದಲು, ಸಮಾಜಕ್ಕೆ, ದೇಶಕ್ಕೆ ಸೇವೆ ಮಾಡಲು ಮುಂದಾಗಬೇಕು ಎಂದರು. ಕಾಲೇಜಿನಲ್ಲಿ ಗಾಂಧಿ ಅಧ್ಯಯನ ಕೇಂದ್ರ ಉದ್ಘಾಟಿಸಲಾಯಿತು. ಡಾ.ವೂಡೆ ಪಿ.ಕೃಷ್ಣ, ಎನ್.ಆರ್.ಪಂಡಿತಾರಾಧ್ಯ, ಪ್ರಾಂಶುಪಾಲ ಪ್ರೊ.ಟಿ. ದೊಡ್ಡೇಗೌಡ ಇದ್ದರು.

ಕರ್ನಾಟಕ

ಗುರುವಾರ,22 ಜೂನ್ 2017

## ಶೇಷಾದ್ರಿಪುರಂ ಪಿಯು ಕಾಲೇಜು ರಜತ ಮಹೋತ್ಸವದಲ್ಲಿ ಅಣ್ಣಾ ಹಜಾರೆ ಕರೆ

# ‘ಭ್ರಷ್ಟಾಚಾರ ಕಿತ್ತೊಗೆಯಲು ಪಣ ತೊಡಬೇಕು’

ಉಪನಗರ ವಾರ್ತೆ

**ವಿಕ ಸುದ್ದಿಲೋಕ** ಯಲಹಂಕ

ಭ್ರಷ್ಟಾಚಾರ ನಿರ್ಮೂಲನೆಗೆ ಯುವ ಜನತೆ ಆಂದೋಲನ ಕೈಗೊಳ್ಳಬೇಕು ಎಂದು ಸಾಮಾಜಿಕ ಕಾರ್ಯಕರ್ತ ಅಣ್ಣಾ ಹಜಾರೆ ಕರೆ ನೀಡಿದರು.

ಯಲಹಂಕ ಉಪನಗರದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನಲ್ಲಿ ಆಯೋಜಿಸಲಾಗಿದ್ದ 25ನೇ ರಜತ ಮಹೋತ್ಸವ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ಅವರು, ''ಯುವಕರೇ ರಾಷ್ಟ್ರದ ಶಕ್ತಿ. ಯುವಕರು ಸಮಾಜ ಸೇವೆ ಮಾಡುವುದು ಅಗತ್ಯ. ಸಮಾಜ ಸೇವೆ ಮಾಡುವುದರಿಂದ ಸಂತೋಷ ಸಿಗುತ್ತದೆ,'' ಎಂದು ಹೇಳಿದರು.

''ಶುದ್ಧ ಆಚಾರ, ಶುದ್ಧ ವಿಚಾರ, ನಿಷ್ಕಲ್ಮಶ ಜೀವನ, ಸ್ವಲ್ಪ ತ್ಯಾಗ ಈ ನಾಲ್ಕು ತತ್ವಗಳನ್ನು ಯುವಕರು ಅಳವಡಿಸಿಕೊಳ್ಳಬೇಕು. ವಿದ್ಯಾರ್ಥಿಗಳು ಗಾಂಧೀಜಿಯವರ ತತ್ವಗಳನ್ನು ಅಳವಡಿಸಿಕೊಳ್ಳುವುದರಿಂದ ಎಲ್ಲ ಸಮಸ್ಯೆಗಳಿಗೆ ಪರಿಹಾರ ಸಿಗಲಿದೆ,'' ಎಂದರು.



ಯಲಹಂಕ ಉಪನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ 25ನೇ ರಜತ ಮಹೋತ್ಸವ ಕಾರ್ಯಕ್ರಮವನ್ನು ಸಾಮಾಜಿಕ ಕಾರ್ಯಕರ್ತ ಅಣ್ಣಾ ಹಜಾರೆ ಉದ್ಘಾಟಿಸಿದರು.

ಶೇಷಾದ್ರಿ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ.ವುಡೇ ಪಿ ಕೃಷ್ಣ ಮಾತನಾಡಿ, ''ಅಣ್ಣಾ ಹಜಾರೆ ಅವರು ಭ್ರಷ್ಟಾಚಾರ ವಿರುದ್ಧದ ಆಂದೋಲನದಲ್ಲಿ ಮುಂಚೂಣಿಯಲ್ಲಿದ್ದರು. ರಾವುಲ್‌ಗಾವ್ ಎಂಬ ಪ್ರದೇಶವನ್ನು ಮಾದರಿ ಹಳ್ಳಿಯನ್ನಾಗಿಸಿದ್ದಾರೆ. ಜಲಸಂರಕ್ಷಣೆ ಕುರಿತು ಅರಿವು ಮೂಡಿಸುವ ಮಹತ್ ಕಾರ್ಯ ಕೈಗೊಂಡಿದ್ದಾರೆ,'' ಎಂದರು.

ಪ್ರತಿಭಾವಂತ ವಿಧ್ಯಾರ್ಥಿಗಳಾದ ಶ್ರೀನಿಧಿ ನಾಯಕ್, ಚೇತನಾ ಎಸ್, ಶಿಲ್ಪ, ಶ್ರೀಚಂದನರನ್ನು ಗೌರವಿಸಲಾಯಿತು. ಈ ಸಂದರ್ಭದಲ್ಲಿ ‘ರಜತ ಸಂಚಯಿನಿ ಬೆಳ್ಳಿ ಹೆಜ್ಜೆ’ ನಿಯತಕಾಲಿಕೆಯನ್ನು ಬಿಡುಗಡೆ ಮಾಡಲಾಯಿತು. ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಎಂ.ಗೋಪಾಲ್ ಪ್ರೊ.ಡಿ. ದೊಡ್ಡೇಗೌಡ ಹಾಜರಿದ್ದರು. ಗಾಂಧಿ ಅಧ್ಯಯನ ಕೇಂದ್ರವನ್ನು ಅಣ್ಣಾ ಹಜಾರೆಯವರು ಉದ್ಘಾಟಿಸಿದರು.

ಬೆಂಗಳೂರು
vishwavani.news
22.06.2017 ಗುರುವಾರ

# ಯುವಕರು ಸಮಾಜ ಸೇವೆಗೆ ಮುಂದಾಗಲಿ

ವಿಶ್ವವಾಣಿ ಸುದ್ದಿಮನೆ ಬೆಂಗಳೂರು:



ಯುವಕರಿಂದ ಸಮಾಜ ಸೇವೆ ಅಗತ್ಯ, ಹಳ್ಳಿಗಳು ಮಾದರಿ ಗ್ರಾಮಗಳಾಗಬೇಕು. ಭ್ರಷ್ಟಾಚಾರ ನಿರ್ಮೂಲನೆಗೆ ಆಂದೋಲನ ಕೈಗೊಳ್ಳಬೇಕು. ಆಗ ಮಾತ್ರ ದೇಶದ ಅಭಿವೃದ್ಧಿ ಸಾಧ್ಯ ಎಂದು ಸಾಮಾಜಿಕ ಕಾರ್ಯಕರ್ತ ಅಣ್ಣಾ ಹಜಾರೆ ಹೇಳಿದರು.

ಯಲಹಂಕ ಉಪನಗರದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನಲ್ಲಿ ಆಯೋಜಿಸಲಾಗಿದ್ದ 25ನೇ ರಜತ ಮಹೋತ್ಸವ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಅವರು, ಯುವಕರು ರಾಷ್ಟ್ರ ಶಕ್ತಿ. ದುಷ್ಚಟಗಳಿಗೆ ಬಲಿಯಾಗಬೇಡಿ. ಸಮಾಜ ಸೇವೆ ಮಾಡುವುದರಿಂದ ಸಂತೋಷ ಸಿಗುತ್ತದೆ. ಗ್ರಾಮ, ಸಮಾಜ, ರಾಷ್ಟ್ರ ಸೇವೆ ಮಾಡುವುದೇ ಒಂದು ಉತ್ತಮವಾದ ಕೆಲಸ ಎಂದು ಹೇಳಿದರು.

ಶುದ್ಧ ಆಚಾರ, ಶುದ್ಧ ವಿಚಾರ, ನಿಷ್ಕಲ್ಮಶ ಜೀವನ, ಸ್ವಲ್ಪ ತ್ಯಾಗ ಈ ನಾಲ್ಕು ತತ್ವಗಳನ್ನು ಯುವಕರು ಅಳವಡಿಸಿಕೊಳ್ಳಬೇಕು. ವಿದ್ಯಾರ್ಥಿಗಳು ಗಾಂಧೀಜಿಯವರ ತತ್ತ್ವಗಳನ್ನು ಅಳವಡಿಸಿಕೊಳ್ಳುವುದರಿಂದ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬಹುದು ಎಂದರು.

ಶೇಷಾದ್ರಿ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ.ವುಡೇ.ಪಿ.ಕೃಷ್ಣ ಮಾತನಾಡಿ, ಗಾಂಧೀವಾದಿ, ಸಮಾಜ ಸೇವಕ ಅಣ್ಣಾ ಹಜಾರೆ ಅವರು ಭ್ರಷ್ಟಾಚಾರ ವಿರುದ್ಧ ಆಂದೋಲನ, ರಾಹುಲ್ ಗಾವ್ ಹಳ್ಳಿಯನ್ನು ಮಾದರಿ ಹಳ್ಳಿಯನ್ನಾಗಿ ಮಾಡಿ ತಾಲೂಕು ಹಾಗೂ ಜಿಲ್ಲೆಗಳಲ್ಲಿ ನೀರು ಶೇಖರಣೆ ಮಾಡುವ ಮೂಲಕ ಮಾದರಿಯಾಗಿದ್ದು, ಸಮುದಾಯ ಸಮಾಜದಲ್ಲಿ ನೈತಿಕ ಬದುಕು ಕೈಗೊಂಡವರು ಎಂದರು.

ಇದೇ ವೇಳೆ ಗಾಂಧಿ ಅಧ್ಯಯನ ಕೇಂದ್ರವನ್ನು ಅಣ್ಣಾ ಹಜಾರೆಯವರು ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ಪ್ರತಿಭಾವಂತ ವಿಧ್ಯಾರ್ಥಿಗಳಾದ ಶ್ರೀನಿಧಿ ನಾಯಕ್, ಚೇತನಾ.ಎಸ್, ಶಿಲ್ಪಾ, ಚಂದನ ಅವರನ್ನು ಗೌರವಿಸಲಾಯಿತು. ಮತ್ತು ರಜತ ಸಂಚಾಯಿನಿ ಬೆಳ್ಳಿ ಹೆಜ್ಜೆ ನಿಯತಕಾಲಿಕೆಯನ್ನು ಬಿಡುಗಡೆಲಾಯಿತು.

ಈ ವೇಳೆ ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಎಂ.ಗೋಪಾಲ್ , ಪ್ರೊ.ಡಿ.ದೊಡ್ಡೇಗೌಡ ಇದ್ದರು.

ಹೊಸ ದಿಗಂತ

ಗುರುವಾರ
22 ಜೂನ್ 2017

## ದೇಶದ ಹಿತಕ್ಕಾಗಿ ಹೋರಾಟ ಅನಿವಾರ್ಯ

# ಭ್ರಷ್ಟಾಚಾರ ತಡೆಗೆ ಯುವ ಜನತೆ ಕೈಜೋಡಿಸಿ

▶ ದಿಗಂತ ವರದಿ: ಯಲಹಂಕ, ಜೂ.21

ಭ್ರಷ್ಟಾಚಾರ ನಿರ್ಮೂಲನೆಗೆ ಯುವ ಜನತೆಯು ಆಂದೋಲನ ಕೈ ಜೋಡಿಸುವ ಮೂಲಕ ದೇಶದ ಹಿತಕ್ಕಾಗಿ ಕೆಲಸ ಮಾಡಬೇಕಿದೆ ಎಂದು ಸಾಮಾಜಿಕ ಕಾರ್ಯಕರ್ತ ಅಣ್ಣಾ ಹಜಾರೆ ಕರೆ ನೀಡಿದರು.

ಯಲಹಂಕ ಉಪನಗರದ ಶೇಷಾದ್ರಿಪುರದ ಪದವಿ ಪೂರ್ವ ಕಾಲೇಜಿನಲ್ಲಿ ಆಯೋಜಿಸಲಾಗಿದ್ದ ರಜತ ಮಹೋತ್ಸವ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಅವರು, ಇಂದಿನ ಯುವಜನಾಂಗ ದುಶ್ಚಟಗಳಿಗೆ ಬಲಿಯಾಗುತ್ತಿದ್ದಾರೆ. ಇದರಿಂದ ಹೊರಬಂದ ಭ್ರಷ್ಟಾಚಾರ ವ್ಯವಸ್ಥೆಯನ್ನು ಇನ್ನಿಲ್ಲವಾಗಿಸಬೇಕಿದೆ. ಅಲ್ಲದೆ, ಸಮಾಜ ಸೇವೆಗೆ ಮುಂದಾಗಬೇಕಿದೆ ಎಂದು ಹೇಳಿದರು.

ಶುದ್ಧ ಆಚಾರ, ಶುದ್ಧ ವಿಚಾರ, ನಿಷ್ಕಲ್ಮಶ ಜೀವನ, ತ್ಯಾಗದ ಮನೋಭಾವ ಈ ನಾಲ್ಕು ತತ್ವಗಳನ್ನು ಯುವ ಜನತೆ ಅಳವಡಿಸಿಕೊಳ್ಳಬೇಕೆಂದ ಅವರು ವಿದ್ಯಾರ್ಥಿಗಳು ಗಾಂಧೀಜಿ ಅವರ ತತ್ವಗಳನ್ನು ಅಳವಡಿಸಿಕೊಳ್ಳುವುದರಿಂದ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಎಂದರು.

ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಮಾತನಾಡಿ ಗಾಂಧಿವಾದಿ ಸಮಾಜ ಸೇವಕ ಅಣ್ಣ ಹಜಾರೆ ಅವರು ಭ್ರಷ್ಟಾಚಾರ ವಿರುದ್ಧ ಆಂದೋಲನ ಮೂಲಕ ಇಂದಿನ ಯುವ ಜನರಿಗೆ ಮಾದರಿಯಾಗಿದ್ದಾರೆ. ಅಲ್ಲದೆ, ಅವರ ಹುಟ್ಟೂರಿನ ಮಾದರಿ ಹಳ್ಳಿಯನ್ನಾಗಿ ಮಾಡಿರುವುದು ಶ್ಲಾಘನೀಯ ಎಂದು ಮೆಚ್ಚುಗೆ ಸೂಚಿಸಿದರು.

ದಿಗಂತ ಚಿತ್ರ



ಯಲಹಂಕ ಉಪನಗರದ ಶೇಷಾದ್ರಿಪುರದ ಪದವಿ ಪೂರ್ವ ಕಾಲೇಜಿನಲ್ಲಿ ಬುಧವಾರ ಹಮ್ಮಿಕೊಂಡಿದ್ದ ರಜತ ಮಹೋತ್ಸವ ಕಾರ್ಯಕ್ರಮವನ್ನು ಸಾಮಾಜಿಕ ಕಾರ್ಯಕರ್ತ ಅಣ್ಣಾ ಹಜಾರೆ ಉದ್ಘಾಟಿಸಿದರು. ಶೇಷಾದ್ರಿಪುರ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ.ವೂಡೇ.ಪಿ ಕೃಷ್ಣ ಮತ್ತಿತರರು ಹಾಜರಿದ್ದರು.

# ವಿದ್ಯಾವಂತ ಮಕ್ಕಳು ದೇಶದ ಆಸ್ತಿಗಳಾಗಬೇಕು

**ತುಮಕೂರು**

ನಗರದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜು ಮತ್ತು ಪದವಿ ಕಾಲೇಜಿನ ಪ್ರಥಮ ವರ್ಷದ ವಿದ್ಯಾರ್ಥಿಗಳಿಗೆ ಸ್ವಾಗತ ಸಮಾರಂಭವನ್ನು ಏರ್ಪಡಿಸಲಾಗಿದ್ದು,

ತುಮಕೂರಿನ ವಿವೇಕಾನಂದ ಆಶ್ರಮದ ಅಧ್ಯಕ್ಷರಾದ ಶ್ರೀ ವೀರೇಶಾನಂದ ಸರಸ್ವತಿಯವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು ವಿದ್ಯಾರ್ಥಿಗಳನ್ನು ಉದ್ದೇಶಿಸಿ ಯಾವುದೇ ರಾಷ್ಟ್ರದ ಶಕ್ತಿ ಅಲ್ಲಿನ ಶೈಕ್ಷಣಿಕ ಶಕ್ತಿಯೇ ಆಗಿದೆ ಎನ್ನುವ ನಾಣ್ಣುಡಿಯೊಂದಿಗೆ ತಮ್ಮ ಹಿತವಚನ ಪ್ರಾರಂಭಿಸಿ ವಿದ್ಯಾವಂತ ಮಕ್ಕಳು ದೇಶದ ಮತ್ತು ಸಮಾಜದ ಆಸ್ತಿಗಳಾಗಬೇಕೆಂದು ಆಶೀರ್ವದಿಸಿ ಮಕ್ಕಳಿಗೆ ಪ್ರತಿಜ್ಞಾವಿಧಿಯನ್ನು ಬೋಧಿಸಿದರು.

ಸಂಸ್ಥೆಯ ಅಧ್ಯಕ್ಷರಾದ ಎನ್ ಆರ್ ಪಂಡಿತಾರಾಧ್ಯರವರು ತಮ್ಮ ಸ್ಫೂರ್ತಿದಾಯಕ ನುಡಿಗಳಿಂದ ಮಕ್ಕಳನ್ನು ಪ್ರೋತ್ಸಾಹಿಸಿದರು ಮತ್ತು ಸಂಸ್ಥೆಯ ಕಾರ್ಯದರ್ಶಿಗಳಾದ ಡಾ. ವೂಡೇ ಪಿ ಕೃಷ್ಣರವರು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯು ನಡೆದು ಬಂದ ಯಶಸ್ಸಿನ ದಾರಿಯ ಪಕ್ಷಿನೋಟವನ್ನು ವಿವರಿಸುತ್ತ ಬಡ ಮತ್ತು ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಉತ್ತಮ ಶಿಕ್ಷಣವನ್ನು ನೀಡುವ ಉದ್ದೇಶ ನಮ್ಮ ಸಂಸ್ಥೆಯದಾಗಿದ್ದು ನಾಡಿನಾದ್ಯಂತ ಶಿಕ್ಷಣ ಸಂಸ್ಥೆಯನ್ನು ವಿಸ್ತರಿಸುವ ಗುರಿ ಹೊಂದಿದ್ದೇವೆ ಎಂದು ತಿಳಿಸಿದರು.

ಸುಮಾರು 50ಕ್ಕೂ ಹೆಚ್ಚು ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಸಂಸ್ಥೆಯವತಿಯಿಂದ ಪ್ರತಿಭಾ ಪುರಸ್ಕಾರ ನೀಡಲಾಯಿತು. ಕಾಲೇಜಿನ ಪ್ರಾಂಶುಪಾಲ ಜಿ ಟಿ ಜಗದೀಶ್ ಸ್ವಾಗತಿಸಿದರು. ಎಂ ಸಿ ಪ್ರತಿಭಾ ನಿರೂಪಿಸಿ, ಡಾ. ಕೃಷ್ಣಮೂರ್ತಿ ವಂದಿಸಿದರು.

# ಕನ್ನಡಪ್ರಭ

ಭಾನುವಾರ 18.6.2017



ಕರ್ನಾಟಕ ಗಾಂಧೀ ಸ್ಮಾರಕ ನಿಧಿ ವಿವಿಧ ಸಂಸ್ಥೆಗಳ ಸಹಯೋಗದಲ್ಲಿ ಶನಿವಾರ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ 'ಗಾಂಧೀ ವಿಚಾರ ಸಂಸ್ಕಾರ ಪರೀಕ್ಷೆ' ಅಭ್ಯರ್ಥಿಗಳಿಗೆ ವಿಧಾನ ಪರಿಷತ್ ಮಾಜಿ ಸದಸ್ಯ ಡಾ.ಪಿ. ರಾಮಯ್ಯ ಪ್ರಮಾಣ ಪತ್ರ ವಿತರಿಸಿದರು.

ಈ ಸಂಜೆ
ಶನಿವಾರ, 17-6-2017




ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಗಾಂಧಿಭವನದಲ್ಲಿಂದು ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಎಸ್.ಟಿ.ಗುಪ್ತಾ ಹಾಗೂ ವೀರಯ್ಯ ಸ್ವಾಮಿ ಶಾಸ್ತ್ರಿಮಠ ಅವರನ್ನು ಸನ್ಮಾನಿಸಲಾಯಿತು. ಡಾ.ರಾಜೇಗೌಡ ಹೊಸಹಳ್ಳಿ, ಬಸವರಾಜ್, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ.ಪಿ.ಕೃಷ್ಣ ಮತ್ತಿತರರು ಹಾಜರಿದ್ದರು.

ಉದಯವಾಣಿ ಬೆಂಗಳೂರು
ಶುಕ್ರವಾರ ¦ ಏಪ್ರಿಲ್ ¦ 21 ¦ 2017



## ಚಾಲನೆ...

ಗಾಂಧಿ ಭವನದಲ್ಲಿ ಗುರುವಾರ ಏರ್ಪಡಿಸಿದ್ದ ರಾಷ್ಟ್ರೀಯ ವಿಚಾರ ಸಂಕಿರಣಕ್ಕೆ ಮುಖ್ಯಮಂತ್ರಿಗಳ ಮಾಧ್ಯಮ ಕಾರ್ಯದರ್ಶಿ ದಿನೇಶ್ ಅಮಿನ್ ಮಟ್ಟು ಚಾಲನೆ ನೀಡಿದರು.

ವಿಜಯ ಕರ್ನಾಟಕ ನಮ್ಮ ಬೆಂಗಳೂರು ಶುಕ್ರವಾರ,21 ಏಪ್ರಿಲ್ 2017

# ‘ಬಹುತೇಕರಲ್ಲಿ ಗಾಂಧಿ ಕುರಿತು ತಪ್ಪು ಅಭಿಪ್ರಾಯವಿದೆ’

ವಿಕ ಸುದ್ದಿಲೋಕ ಬೆಂಗಳೂರು

ಬಹು ಆಯಾಮಗಳ ವ್ಯಕ್ತಿತ್ವವನ್ನುಳ್ಳ ಮಹಾತ್ಮ ಗಾಂಧೀಜಿಯವರನ್ನು ಹಿಂದುಗಳು, ಮುಸ್ಲಿಮರು ಮತ್ತು ದಲಿತರು ಸೇರಿದಂತೆ ಎಲ್ಲರೂ ತಪ್ಪಾಗಿ ತಿಳಿದುಕೊಂಡಿದ್ದಾರೆ ಎಂದು ಮುಖ್ಯಮಂತ್ರಿಗಳ ಮಾಧ್ಯಮ ಸಲಹೆಗಾರ ದಿನೇಶ್ ಅಮಿನ್‌ಮಟ್ಟು ಹೇಳಿದ್ದಾರೆ.

ನಗರದ ಗಾಂಧಿ ಭವನದಲ್ಲಿ ಗುರುವಾರ ಏರ್ಪಡಿಸಿದ್ದ ‘ಆರೋಗ್ಯಕರ ಸಮಾಜಕ್ಕೆ ಬುದ್ಧ, ಬಸವ, ಗಾಂಧಿ ಮತ್ತು ಅಂಬೇಡ್ಕರ್ ವಿಚಾರಗಳ ಕೊಡುಗೆ’ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಅವರು ಮಾತನಾಡಿದರು.


ವಿಚಾರ ಸಂಕಿರಣವನ್ನು ದಿನೇಶ್ ಅಮಿನ್‌ಮಟ್ಟು ಉದ್ಘಾಟಿಸಿದರು.

‘‘ನಮ್ಮಲ್ಲಿ ಹೆಚ್ಚಿನ ದಲಿತರು ಗಾಂಧೀಜಿಯವರ ಬಗ್ಗೆ ಪೂರ್ವಗ್ರಹ ಹೊಂದಿದ್ದು, ಅವರನ್ನು ದಲಿತವಿರೋಧಿ ಎನ್ನುವಂತೆ ಕಾಣುತ್ತಾರೆ. ಗಾಂಧಿ ಮತ್ತು ಅಂಬೇಡ್ಕರ್ ಇಬ್ಬರನ್ನೂ ಅವರ ಭಿನ್ನಾಭಿಪ್ರಾಯಗಳ ಮೂಲಕ ಅರಿಯುವ ಬದಲು ಸಹಮತ ಹೊಂದಿದ್ದ ವಿಚಾರಗಳ ಮೂಲಕ ತಿಳಿದುಕೊಳ್ಳಬೇಕು’’ ಎಂದು ಅವರು ಸೂಚಿಸಿದರು.

ದಲಿತ ಮುಖಂಡ ಮಾವಳ್ಳಿ ಶಂಕರ್ ‘‘ದೇವನೂರು ಮಹದೇವ ಅವರಂಥ ಸಾಹಿತಿಗಳು ಅಂಬೇಡ್ಕರ್‌ಗಿಂತ ಗಾಂಧೀಜಿ ಶ್ರೇಷ್ಠ ಎನ್ನುವಂತೆ ಮಾತನಾಡುತ್ತಾರೆ. ಇವರಿಗೆ ದಲಿತರು ಎದುರಿಸುತ್ತಿರುವ ಅವಮಾನಗಳು ಗೊತ್ತಿಲ್ಲ’’ ಎಂದರು.

‘‘ಇವತ್ತಿಗೂ ಒಂದು ಬೀದಿಗೆ ಅಂಬೇಡ್ಕರ್ ಹೆಸರನ್ನು ಇಡುವುದು ಸುಲಭವಾಗಿಲ್ಲ, ದಲಿತ ವರ್ಗದ ಕೆಲಸಗಳೆಲ್ಲವೂ ಹೋರಾಟದ ಮೂಲಕವೇ ಆಗಬೇಕಾಗಿದೆ. ಮಾನವೀಯ ನೆಲೆಯ ಮೇಲೆ ಭಾರತವನ್ನು ಕಟ್ಟಬೇಕೆನ್ನುವ ಅವರ ಕನಸನ್ನು ನಾವೆಲ್ಲರೂ ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು’’ ಎಂದು ಅವರು ಆಶಿಸಿದರು.

ಗಾಂಧಿ ಭವನದ ಅಧ್ಯಕ್ಷ ವೂಡೆ ಕೃಷ್ಣ, ರುದ್ರಪ್ಪ ಅನಗವಾಡಿ, ಇಂದಿರಾ ಕೃಷ್ಣಪ್ಪ, ಮಂಗ್ಳೂರ ವಿಜಯ, ಪ್ರೊ.ಶಿವರಾಜು ಮುಂತಾದವರು ಉಪಸ್ಥಿತರಿದ್ದರು.

ಪ್ರಜಾವಾಣಿ

ಬುಧವಾರ ಏಪ್ರಿಲ್ 19, 2017



ಮಾರ್ಕಂಡೇಯ ಶ್ರೀನಿವಾಸ್, ಗಾಂಧಿವಾದಿ ಸಿ.ಎಚ್. ಜಾಕೋಬ ಲೋಬೊ, ಡಾ. ಪಿ. ರಾಮಯ್ಯ, ನಿವೃತ್ತ ನ್ಯಾಯಮೂರ್ತಿ ಎ.ಜೆ. ಸದಾಶಿವ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಹೊ.ಶ್ರೀನಿವಾಸಯ್ಯ ಅವರ ಪುತ್ರಿ ಶಶಿಕೃಷ್ಣ ಅವರು ಶ್ರೀನಿವಾಸಯ್ಯ ಅವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು -ಪ್ರಜಾವಾಣಿ ಚಿತ್ರ

# 'ಗಾಂಧಿವಾದಿ ಹೊ.ಶ್ರೀನಿವಾಸಯ್ಯ ಸ್ಮರಣಾಶ್ರಮ ಸ್ಥಾಪನೆಗೆ ಚಿಂತನೆ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಸಬರಮತಿ ಆಶ್ರಮದ ಮಾದರಿಯಲ್ಲಿ ಗಾಂಧಿವಾದಿ ಹೊ. ಶ್ರೀನಿವಾಸಯ್ಯ ಅವರ ಹೆಸರಿನಲ್ಲಿ ಆಶ್ರಮ ಪ್ರಾರಂಭಿಸಲು ಚಿಂತಿಸಲಾಗುತ್ತಿದೆ' ಎಂದು ಅವರ ಸ್ನೇಹಿತರಾದ ರಾಮಾನುಜ ತಿಳಿಸಿದರು.

ಹೊ.ಶ್ರೀನಿವಾಸಯ್ಯ ಅವರ ಕುಟುಂಬ ಮಂಗಳವಾರ ನಗರದಲ್ಲಿ ಹಮ್ಮಿಕೊಂಡಿದ್ದ ಸಂಸ್ಮರಣ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

'ಶ್ರೀನಿವಾಸಯ್ಯ ಅವರ ಹುಟ್ಟೂರಾದ ನಾಗಮಂಗಲದ ಚೌದರಿಕೊಪ್ಪಲುವಿನಲ್ಲಿ ವಸ್ತು ಸಂಗ್ರಹಾಲಯ ರೂಪದ ಆಶ್ರಮ ನಿರ್ಮಿಸುತ್ತೇವೆ. ಅಲ್ಲಿ ಅವರಿಗೆ ಸಂಬಂಧಪಟ್ಟ ಪುಸ್ತಕಗಳು, ಪ್ರಶಸ್ತಿಗಳು ಹಾಗೂ ಅಪರೂಪದ ಛಾಯಾಚಿತ್ರಗಳು ಇರಲಿವೆ' ಎಂದು ಹೇಳಿದರು.

ನಿವೃತ್ತ ನ್ಯಾಯಮೂರ್ತಿ ಎ.ಜೆ. ಸದಾಶಿವ, 'ಬಾಪೂಜಿ ಅವರಂತೆ ಸಂಪೂರ್ಣವಾಗಿ ಬದುಕಲು ಪ್ರಯತ್ನಿಸಿ ಯಶಸ್ವಿಯಾದವರಲ್ಲಿ ಶ್ರೀನಿವಾಸಯ್ಯ ಅವರು ಒಬ್ಬರು' ಎಂದರು.

ಶಾಸಕ ಸಿ.ಎನ್. ಅಶ್ವತ್ಥ ನಾರಾಯಣ, 'ಆಶ್ರಮ ಸ್ಥಾಪಿಸಲು ಬೇಕಾಗುವ ಅಗತ್ಯ ಸಹಾಯವನ್ನು ನೀಡಲು ಸಿದ್ಧನಿದ್ದೇನೆ. ಈಗಾಗಲೇ ಮಲ್ಲೇಶ್ವರದ 6ನೇ ಅಡ್ಡರಸ್ತೆಗೆ ಶ್ರೀನಿವಾಸಯ್ಯ ಅವರ ಹೆಸರಿಡಲಾಗಿದೆ' ಎಂದು ಹೇಳಿದರು.

ಬೆಂಗಳೂರು
vishwavani.news
16.04.2017 ಭಾನುವಾರ

ವಿಶ್ವವಾಣಿ



ಪದ್ಮಶ್ರೀ ಪ್ರಶಸ್ತಿ ಪುರಸ್ಕೃತೆ ಭಾರತಿ ವಿಷ್ಣುವರ್ಧನ್ ಮತ್ತು 64ನೇ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ ಪುರಸ್ಕೃತರಿಗೆ ನಗರದ ಗಾಂಧಿ ಭವನದಲ್ಲಿ ಸನ್ಮಾನಿಸಲಾಯಿತು.

ಉದಯವಾಣಿ ಬೆಂಗಳೂರು
ಭಾನುವಾರ | ಏಪ್ರಿಲ್ | 16 | 2017

# ಕೋಟ್ಯಂತರ ಕನ್ನಡಿಗರ ಬೆಂಬಲದಿಂದ ಪದ್ಮಶ್ರೀ

ಬೆಂಗಳೂರು : 'ಕನ್ನಡಿಗರ ಪ್ರೀತಿ, ಸಹಕಾರ, ಚಿತ್ರರಂಗದ ಬೆಂಬಲ ಮತ್ತು ಪ್ರೋತ್ಸಾಹದಿಂದಾಗಿಯೇ ನಾನು ಈ ಗೌರವಕ್ಕೆ ಪಾತ್ರಳಾಗಲು ಮುಖ್ಯ ಕಾರಣ' ಎಂದು ಪದ್ಮಶ್ರೀ ಪುರಸ್ಕೃತೆ ಡಾ.ಭಾರತಿ ವಿಷ್ಣುವರ್ಧನ್ ಹೇಳಿದರು.

ಗಾಂಧಿಭವನದಲ್ಲಿ ಶನಿವಾರ ಕರ್ನಾಟಕ ಚಲನಚಿತ್ರ ಅಕಾಡೆಮಿ ವತಿಯಿಂದ ಪದ್ಮಶ್ರೀ ಹಾಗೂ 64ನೇ ರಾಷ್ಟ್ರ ಚಲನಚಿತ್ರ ಪ್ರಶಸ್ತಿ ವಿಜೇತರಿಗೆ ಆಯೋಜಿಸಿದ್ದ ಸಮಾರಂಭದಲ್ಲಿ ಸನ್ಮಾನ ಸ್ವೀಕರಿಸಿ ಅವರು ಮಾತನಾಡಿದರು.

'ಈ ಪ್ರಶಸ್ತಿ ನನ್ನ ಯಜಮಾನರಿಗೆ ಬರಬೇಕಿತ್ತು. ಆದರೆ, ಬರಲಿಲ್ಲ. ಆದರೆ, ಅವರು ಎಂದೆಂದಿಗೂ ನನ್ನೊಂದಿಗೇ ಇದ್ದಾರೆಂದು ಭಾವಿಸಿದ್ದೇನೆ' ಎಂದು ಹೇಳುತ್ತಲೇ ಕ್ಷಣಕಾಲ ಭಾವುಕರಾದರು.

ರಾಷ್ಟ್ರಪ್ರಶಸ್ತಿ ವಿಜೇತರ ಪೈಕಿ ಮಾತನಾಡಿದ ನಿರ್ದೇಶಕ-ನಟ ನಿಖಿಲ್ ಮಂಜು, 'ಇತ್ತೀಚಿನ ವರ್ಷಗಳಲ್ಲಿ ಕನ್ನಡ ಚಿತ್ರರಂಗ ಎಲ್ಲೆಡೆ ಸುದ್ದಿಯಾಗುತ್ತಿದೆ. ಹೊಸ ಹೊಸ ಪ್ರಯೋಗಗಳೇ ಇಲ್ಲಿ ಹೆಚ್ಚಾಗುತ್ತಿವೆ. ಅದರಲ್ಲೂ ಹೊಸಬರೇ ಹೆಚ್ಚು ಹೊಸ ಪ್ರಯತ್ನಕ್ಕೆ ಮುಂದಾಗುತ್ತಿದ್ದಾರೆ. ಕಲಾತ್ಮಕ



ಪದ್ಮಶ್ರೀ ಪುರಸ್ಕೃತೆ ಡಾ.ಭಾರತಿ ವಿಷ್ಣುವರ್ಧನ್ ಅವರನ್ನು ಗೌರವಿಸಿದ ಗಣ್ಯರು.

ಚಿತ್ರಗಳಿಂದ ಕನ್ನಡತನ, ಸಂಸ್ಕೃತಿ, ಭಾಷೆ ಉಳಿಯುತ್ತದೆಂಬ ಭಾವನೆ ನನ್ನದು. ಈ ರೀತಿಯ ಚಿತ್ರಗಳು ಇನ್ನಷ್ಟು ಹೆಚ್ಚಬೇಕು ಎಂದರು.

ಕರ್ನಾಟಕ ಚಲನಚಿತ್ರ ಅಕಾಡೆಮಿ ಅಧ್ಯಕ್ಷ ರಾಜೇಂದ್ರ ಸಿಂಗ್ ಬಾಬು ಮಾತನಾಡಿ, 'ಮುಂದಿನ ದಿನಗಳಲ್ಲಿ, ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಗುರುತಿಸಿಕೊಂಡ ಕನ್ನಡ ಸಿನಿಮಾಗಳನ್ನು ಜನಸಾಮಾನ್ಯರಿಗೆ ತಲುಪಿಸುವ ಉದ್ದೇಶದಿಂದ ಬೆಂಗಳೂರು, ಮಂಗಳೂರು, ಧಾರವಾಡ ಸೇರಿ ರಾಜ್ಯದ ಪ್ರಮುಖ ನಗರಗಳಲ್ಲಿ ಒಂದು ವಾರ ಚಿತ್ರೋತ್ಸವ ನಡೆಸುವ ಪ್ರಯತ್ನ ಮಾಡಲಾಗುವುದು. ರಾಜ್ಯ ಸರ್ಕಾರ 300 ಜನತಾ ಚಿತ್ರಮಂದಿರಗಳನ್ನು ಘೋಷಣೆ ಮಾಡಿದೆ. ಮುಂದಿನ ದಿನಗಳಲ್ಲಿ ಅಲ್ಲೂ ಸಹ ಇಂತಹ ಪ್ರಶಸ್ತಿ ಪಡೆದ ಚಿತ್ರಗಳು ಪ್ರದರ್ಶನವಾಗಲು ಅನುಕೂಲ ಮಾಡಿಕೊಡಬೇಕೆಂದು ಮನವಿ ಮಾಡಲಾಗುವುದು' ಎಂದರು.

ಚಲನಚಿತ್ರ ವಾಣಿಜ್ಯ ಮಂಡಳಿ ಅಧ್ಯಕ್ಷ ಸಾ.ರಾ. ಗೋವಿಂದು ಮಾತನಾಡಿ, 'ರಾಜ್ಯ ಪ್ರಶಸ್ತಿಗಳಿಗೆ ಆದಷ್ಟು ಕನ್ನಡತನ ಇರುವಂತಹ ಚಿತ್ರಗಳನ್ನೇ ಆಯ್ಕೆ ಮಾಡಬೇಕು. ಅದಕ್ಕೆ ಮೊದಲ ಆದ್ಯತೆ ನೀಡಬೇಕು' ಎಂದರು. ಶಾಸಕ ಹಾಗೂ ನಿರ್ಮಾಪಕರ ಸಂಘದ ಅಧ್ಯಕ್ಷ ಮುನಿರತ್ನ, ಸೂರಪ್ಪ ಬಾಬು ಸೇರಿ ಇತರರು ಇದ್ದರು

## ಕರ್ನಾಟಕ ಚಲನಚಿತ್ರ ಅಕಾಡೆಮಿ ಅಧ್ಯಕ್ಷ ಎಸ್ ವಿ ರಾಜೇಂದ್ರ ಸಿಂಗ್ ಬಾಬು ಅಭಿಮತ

# ಕನ್ನಡ ಚಿತ್ರರಂಗದಲ್ಲಿ ಹೊಸತನ ಮೂಡಿದೆ

■ ವಿಕ ಸುದ್ದಿಲೋಕ ಬೆಂಗಳೂರು

ಹೊಸ ಬಗೆಯ ಕಥಾಶೈಲಿ ಮತ್ತು ತಂತ್ರಜ್ಞಾನಗಳಿಂದಾಗಿ ಕನ್ನಡ ಚಿತ್ರರಂಗವು ಹೊಸಬಗೆಯ ಗುಣಮಟ್ಟವನ್ನು ಕಾಣುತ್ತಿದೆ ಎಂದು ಕರ್ನಾಟಕ ಚಲನಚಿತ್ರ ಅಕಾಡೆಮಿ ಅಧ್ಯಕ್ಷ ಎಸ್ ವಿ ರಾಜೇಂದ್ರ ಸಿಂಗ್ ಬಾಬು ಹೇಳಿದ್ದಾರೆ.

ನಗರದ ಗಾಂಧಿ ಭವನದಲ್ಲಿ ಶನಿವಾರ ನಡೆದ 'ಪದ್ಮಶ್ರೀ ಮತ್ತು ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ ಪುರಸ್ಕೃತರಿಗೆ ಅಭಿನಂದನೆ' ಸಲ್ಲಿಸುವ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದರು.

''ಹಿಂದೆಲ್ಲ ಕೇವಲ 10-15 ಚಿತ್ರಮಂದಿರಗಳಲ್ಲಿ ಮಾತ್ರ ಕನ್ನಡ ಸಿನಿಮಾಗಳು ಬಿಡುಗಡೆ ಆಗುತ್ತಿದ್ದವು. ಆದರೆ ಇತ್ತೀಚೆಗೆ ಒಂದು ಸಿನಿಮಾ 400-500 ಚಿತ್ರಮಂದಿರಗಳಲ್ಲಿ ಏಕಕಾಲಕ್ಕೆ ತೆರೆಯ ಮೇಲೆ ಬರುತ್ತಿದೆ. ಪರಭಾಷೆಗಳ ಪೈಪೋಟಿಯ ಮಧ್ಯೆಯೂ ಕನ್ನಡ ಚಿತ್ರಗಳು ವಿಕ್ರಮಗಳನ್ನು ಸ್ಥಾಪಿಸುತ್ತಿರುವುದು ಹೆಗ್ಗಳಿಕೆಯ ಸಂಗತಿಯಾಗಿದೆ,'' ಎಂದು ಮೆಚ್ಚುಗೆ ಸೂಸಿದರು.

''ಕನ್ನಡ ಚಿತ್ರರಂಗದಲ್ಲಿ ನಟಿ ಭಾರತಿ ಮಾಡಿರುವ ಸಾಧನೆ ಅಪಾರವಾದುದು. ಅವರು ಅತ್ಯುತ್ತಮ ಚಿತ್ರಗಳ ಮೂಲಕ ಜನರ ಮನಗೆದ್ದಿದ್ದಾರೆ. ಒಂದು ಕಾಲದಲ್ಲಿ ಭಾರತಿ, ಆರತಿ, ಕಲ್ಪನಾ, ಜಯಂತಿ ಮುಂತಾದವರು ಇಡೀ ಚಿತ್ರದ ಹೊಣೆಯನ್ನು ತಾವೇ ಹೊತ್ತುಕೊಂಡು, ಯಶಸ್ವಿಯಾಗುತ್ತಿದ್ದರು. ಆದರೆ ಈಗ ನಮ್ಮಲ್ಲಿ ಇಂಥ ಹೀರೋಯಿನ್‌ಗಳ ಕೊರತೆ ಕಾಣುತ್ತಿದೆ,'' ಎಂದು ಬೇಸರದಿಂದ ನುಡಿದರು.

''ಪ್ರಶಸ್ತಿ ಪುರಸ್ಕೃತ ಚಿತ್ರಗಳ ಒಂದು ಸಿನಿಮೋತ್ಸವವನ್ನು ಸದ್ಯದಲ್ಲೇ ಬೆಂಗಳೂರಿನ ಚಾಮುಂಡೇಶ್ವರಿ ಸ್ಟುಡಿಯೋದಲ್ಲಿ ಹಮ್ಮಿಕೊಳ್ಳಲಾಗುವುದು. ಈ ಸಿನಿಮೋತ್ಸವವು ಮಂಗಳೂರು, ಧಾರವಾಡ, ಬೆಳಗಾವಿ, ಕಲಬುರಗಿ ಮುಂತಾದ ಕಡೆಗಳಿಗೂ ಹೋಗಲಿದೆ,'' ಎಂದು ಅವರು ತಿಳಿಸಿದರು.

ಇದೇ ಸಂದರ್ಭದಲ್ಲಿ ಮಾತನಾಡಿದ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿಯ ಅಧ್ಯಕ್ಷ ಸಾ ರಾ ಗೋವಿಂದು ''ಇಂದು ಕನ್ನಡ ಚಿತ್ರರಂಗ ಉಳಿದಿರುವುದೇ ಕಮರ್ಷಿಯಲ್ ಸಿನಿಮಾಗಳಿಂದ. ಆದರೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಕನ್ನಡಕ್ಕೆ ಹೆಸರು ತರುತ್ತಿರುವುದು ಪ್ರಯೋಗಾತ್ಮಕ ಚಿತ್ರಗಳು,'' ಎಂದರು. ಸೂರಪ್ಪ ಬಾಬು, ನಿರ್ಮಾಪಕರ ಸಂಘದ ಅಧ್ಯಕ್ಷ ಮುನಿರತ್ನ, ಗಾಂಧಿ ಭವನದ ಅಧ್ಯಕ್ಷ ವೂಡೆ ಪಿ ಕೃಷ್ಣ ಮುಂತಾದವರು ಉಪಸ್ಥಿತರಿದ್ದರು.

ಗಾಂಧಿ ಭವನದಲ್ಲಿ ಶನಿವಾರ ನಡೆದ ಕಾರ್ಯಕ್ರಮದಲ್ಲಿ ನಟಿ ಭಾರತಿ ವಿಷ್ಣುವರ್ಧನ್ ಅವರನ್ನು ಸನ್ಮಾನಿಸಲಾಯಿತು.

ಎರಡು ವರ್ಷಗಳಿಂದ ನಮ್ಮಲ್ಲಿ ಒಳ್ಳೆಯ ಸಿನಿಮಾಗಳು ಬರುತ್ತಿವೆ. ಈಗ ಇಡೀ ದೇಶದ ಸಿನಿಮಾರಂಗ ಈಗ ನಮ್ಮತ್ತ ನೋಡುತ್ತಿದೆ. ಈ ಸಿನಿಮಾಗಳು ನಮ್ಮ ಸಾಹಿತ್ಯ, ಸಂಸ್ಕೃತಿ ಮತ್ತು ಸಮಾಜದ ಕೊಂಡಿಯಂತೆ ಇವೆ. ಇದು ಸ್ವಾಗತಾರ್ಹ ಬೆಳವಣಿಗೆ.

**ನಿಖಿಲ್ ಮಂಜು**

ಕನ್ನಡ ಚಿತ್ರರಂಗ ನನಗೆ ಎಲ್ಲವನ್ನೂ ಕೊಟ್ಟಿದೆ. ನನಗೆ ಬಂದಿರುವ ಪದ್ಮಶ್ರೀ ಪುರಸ್ಕಾರವು ನನ್ನ ಪತಿ ವಿಷ್ಣುವರ್ಧನ್ ಅವರಿಗೇ ಬರಬೇಕಾಗಿತ್ತು. ಈಗ ಈ ಪ್ರಶಸ್ತಿಯನ್ನು ನಾನು ಅವರಿಗೇ ಅರ್ಪಿಸುತ್ತಿದ್ದೇನೆ.

**ಭಾರತಿ ವಿಷ್ಣುವರ್ಧನ್**

4
ಉದಯವಾಣಿ ಬೆಂಗಳೂರು
ಶನಿವಾರ | ಏಪ್ರಿಲ್ | 15 | 2017

# ಪದಾಧಿಕಾರಿಗಳ ಆಯ್ಕೆ

ಬೆಂಗಳೂರು: ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾಗಿ ಡಾ.ವೂಡೇ ಪಿ.ಕೃಷ್ಣ ಸರ್ವಾನುಮತದಿಂದ ಆಯ್ಕೆಯಾಗಿದ್ದಾರೆ. ಉಪಾಧ್ಯಕ್ಷರಾಗಿ ಪ್ರೊ. ಜೆ.ಬಿ.ಶಿವರಾಜು, ವಿ.ಎನ್.ತಿಪ್ಪನಗೌಡ, ಕಾರ್ಯದರ್ಶಿಯಾಗಿ ಈ.ಬಸವರಾಜು ಹಾಗೂ ಸದಸ್ಯರಾಗಿ ಪ್ರೊ.ಎಸ್.ಜಿ.ಸಿದ್ದರಾಮಯ್ಯ, ಎನ್.ಆರ್. ವಿಶುಕುಮಾರ್, ಡಾ.ಬಿ.ಆರ್.ಮಮತಾ, ಎಚ್.ಬಿ.ದಿನೇಶ್, ಇಂದಿರಾ ಕೃಷ್ಣಪ್ಪ, ಎಂ.ಸಿ.ನರೇಂದ್ರ ಮತ್ತು ಉಮೇಶ್ ಬಳಿಗಾರ್ ಆಯ್ಕೆಯಾಗಿದ್ದಾರೆ ಎಂದು ಗಾಂಧಿ ಸ್ಮಾರಕ ನಿಧಿ ಕಾರ್ಯದರ್ಶಿ ಈ.ಬಸವರಾಜು ತಿಳಿಸಿದ್ದಾರೆ.

ವಿಜಯ ಕರ್ನಾಟಕ
ಶನಿವಾರ, 15 ಏಪ್ರಿಲ್ 2017

# ವೂಡೇ ಪಿ. ಕೃಷ್ಣ ಆಯ್ಕೆ



**ಬೆಂಗಳೂರು:** ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾಗಿ ಡಾ. ವೂಡೇ ಪಿ. ಕೃಷ್ಣ ಸರ್ವಾನುಮತದಿಂದ ಆಯ್ಕೆಯಾಗಿದ್ದಾರೆ.

ಉಪಾಧ್ಯಕ್ಷರಾಗಿ ಪ್ರೊ. ಜಿ.ಬಿ. ಶಿವರಾಜು, ವಿ. ಎನ್. ತಿಪ್ಪನಗೌಡ, ಕಾರ್ಯದರ್ಶಿಯಾಗಿ ಈ. ಬಸವರಾಜು ಹಾಗೂ ಸದಸ್ಯರಾಗಿ ಪ್ರೊ. ಎಸ್.ಜಿ. ಸಿದ್ದರಾಮಯ್ಯ, ಎನ್.ಆರ್. ವಿಶುಕುಮಾರ್, ಡಾ. ಬಿ.ಆರ್. ಮಮತ, ಎಚ್.ಬಿ. ದಿನೇಶ್, ಇಂದಿರಾ ಕೃಷ್ಣಪ್ಪ, ಎಂ.ಸಿ. ನರೇಂದ್ರ ಮತ್ತು ಉಮೇಶ್ ಬಳಿಗಾರ್ ಆಯ್ಕೆಯಾಗಿದ್ದಾರೆ ಎಂದು ಪ್ರಕಟಣೆ ತಿಳಿಸಿದೆ.

14 ಏಪ್ರಿಲ್ 2017

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ
VIJAYAVANI > BENGALURU

# ಗಾಂಧಿ ಸ್ಮಾರಕ ನಿಧಿಗೆ ವೂಡೇ ಪಿ. ಕೃಷ್ಣ ಅಧ್ಯಕ್ಷ

ಬೆಂಗಳೂರು: ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾಗಿ ಡಾ. ವೂಡೇ ಪಿ ಕೃಷ್ಣ ಆಯ್ಕೆಯಾಗಿದ್ದಾರೆ. ಉಪಾಧ್ಯಕ್ಷರಾಗಿ ಪ್ರೊ.ಬಿ.ಜಿ. ಶಿವರಾಜು, ವಿ.ಎನ್. ತಿಪ್ಪನಗೌಡ, ಕಾರ್ಯದರ್ಶಿ ಯಾಗಿ ಈ. ಬಸವರಾಜು ಆಯ್ಕೆಯಾಗಿ ದ್ದಾರೆ. ಸದಸ್ಯರಾಗಿ ಪ್ರೊ.ಎಸ್.ಜಿ. ಸಿದ್ದರಾಮಯ್ಯ, ಎನ್.ಆರ್. ವಿಶುಕುಮಾರ್, ಡಾ. ಬಿ.ಆರ್. ಮಮತ, ಎಚ್.ಬಿ. ದಿನೇಶ್, ಇಂದಿರಾ ಕೃಷ್ಣಪ್ಪ, ಎಂ.ಸಿ, ನರೇಂದ್ರ ಮತ್ತು ಉಮೇಶ್ ಬಳಿಗಾರ್ ಆಯ್ಕೆಯಾಗಿದ್ದಾರೆ.



ಸಂಯುಕ್ತ ಕರ್ನಾಟಕ

14 ಏಪ್ರಿಲ್, 2017

ಶುಕ್ರವಾರ

# ಅಧ್ಯಕ್ಷರಾಗಿ ವೂಡೇ ಪಿ.ಕೃಷ್ಣ ಆಯ್ಕೆ

ಬೆಂಗಳೂರು: ಗಾಂಧಿ ಸ್ಮಾರಕ ನಿಧಿ ಮತ್ತು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರಾಗಿ ಡಾ.ವೂಡೇ ಪಿ.ಕೃಷ್ಣ ಅವರನ್ನು ಆಯ್ಕೆ ಮಾಡಲಾಗಿದೆ.



ಇತ್ತೀಚಿಗೆ ನಡೆದ ಕಾರ್ಯಕಾರಿ ಮಂಡಳಿ ಸಭೆಯಲ್ಲಿ ಅಧ್ಯಕ್ಷರಾಗಿ ಡಾ.ವೂಡೇ ಪಿ.ಕೃಷ್ಣ, ಉಪಾಧ್ಯಕ್ಷರನ್ನಾಗಿ ಎಚ್.ಎಂ. ಶಿವಣ್ಣ, ಕಾರ್ಯದರ್ಶಿಯಾಗಿ ಮಲ್ಲೇಪುರಂ ಜಿ.ವೆಂಕಟೇಶ, ಖಜಾಂಚಿಯಾಗಿ ಪ್ರೊ.ಜಿ.ಬಿ. ಶಿವರಾಜು, ನಿರ್ದೇಶಕರಾಗಿ ಪ್ರೊ.ಚಂದ್ರಿಕಾ ಪುರಾಣಿಕ್, ಕೆ.ಜಿ. ವೆಂಕಟೇಶ್, ಪ್ರೊ.ಪ್ರತಾಪ್ ಲಿಂಗಯ್ಯ ಅವರನ್ನು ಆಯ್ಕೆ ಮಾಡಲಾಗಿದೆ.

ಗಾಂಧಿ ಸ್ಮಾರಕ ನಿಧಿಗೆ ಉಪಾಧ್ಯಕ್ಷರುಗಳಾಗಿ ಪ್ರೊ.ಬಿ. ಶಿವರಾಜು, ವಿ.ಎನ್. ತಿಪ್ಪನಗೌಡ, ಕಾರ್ಯದರ್ಶಿಯಾಗಿ ಈ. ಬಸವರಾಜು ಹಾಗೂ ಸದಸ್ಯರನ್ನಾಗಿ ಪ್ರೊ. ಎಸ್. ಜಿ. ಸಿದ್ದರಾಮಯ್ಯ, ಎನ್. ಆರ್. ವಿಶುಕುಮಾರ್, ಡಾ.ಬಿ.ಆರ್. ಮಮತ, ಎಚ್.ಬಿ. ದಿನೇಶ್, ಇಂದಿರ ಕೃಷ್ಣಪ್ಪ, ಎಂ.ಸಿ. ನರೇಂದ್ರ ಮತ್ತು ಉಮೇಶ್ ಬಳಿಗಾರ್, ಅವರನ್ನು ಆಯ್ಕೆ ಮಾಡಲಾಗಿದೆ.



ಕನ್ನಡಪ್ರಭ

ಗುರುವಾರ 13.4.2017

# ಗಾಂಧಿ ಶಾಂತಿ ಪ್ರತಿಷ್ಠಾನ: ನೂತನ ಪದಾಧಿಕಾರಿಗಳು

ಬೆಂಗಳೂರು: ಗಾಂಧಿ ಶಾಂತಿ ಪ್ರತಿಷ್ಠಾನ ಬೆಂಗಳೂರು ಕೇಂದ್ರದ ಕಾರ್ಯಕಾರಿ ಸಮಿತಿಗೆ ಪ್ರಸಕ್ತ ಸಾಲಿನಿಂದ 2019ರ ಸಾಲಿನ ವರೆಗೆ ಪದಾಧಿಕಾರಿಗಳನ್ನು ನೇಮಿಸಲಾಗಿದೆ. ಅಧ್ಯಕ್ಷರಾಗಿ ಡಾ.ಪಿ. ಕೃಷ್ಣ, ಉಪಾಧ್ಯಕ್ಷರಾಗಿ ಎಚ್.ಎಂ. ಶಿವಣ್ಣ, ಕಾರ್ಯದರ್ಶಿ ಯಾಗಿ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್, ಖಜಾಂಚಿಯಾಗಿ ಜಿ.ಟಿ. ಶಿವರಾಜು, ನಿರ್ದೇಶಕರಾಗಿ ಚಂದ್ರಿಕಾ ಪುರಾಣಿಕ್, ಕೆ.ಜಿ. ವೆಂಕಟೇಶ್ ಮತ್ತು ಪ್ರೊ. ಪ್ರತಾಪ್ ಲಿಂಗಯ್ಯ ಅವರನ್ನು ನೇಮಿಸಲಾಗಿದೆ. ಮಾ.7ರಂದು ನಡೆದ ಮೊದಲ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಪದಾಧಿಕಾರಿಗಳ ಆಯ್ಕೆ ಮಾಡಲಾಗಿದೆ ಎಂದು ಪ್ರತಿಷ್ಠಾನದ ಪ್ರಕಟಣೆಯಲ್ಲಿ ತಿಳಿಸಲಾಗಿದೆ.

ಕರ್ನಾಟಕ ಗುರುವಾರ,13 ಏಪ್ರಿಲ್ 2017

# ‘ಗಾಂಧಿ ತತ್ವ ಮೈಗೂಡಿಸಿಕೊಂಡಿದ್ದ ಹೊ.ಶ್ರೀನಿವಾಸಯ್ಯ’

**ವಿಕ ಸುದ್ದಿಲೋಕ** ಬೆಂಗಳೂರು

ಗಾಂಧಿ ತತ್ವಗಳನ್ನು ಮೈಗೂಡಿಸಿಕೊಂಡು ಜೀವನದುದ್ದಕ್ಕೂ ಹೋರಾಟ ನಡೆಸಿದ ಮಹಾನ್ ವ್ಯಕ್ತಿ ಡಾ. ಹೊ. ಶ್ರೀನಿವಾಸಯ್ಯ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ವತಿಯಿಂದ ನಗರದ ಗಾಂಧಿಭವನದಲ್ಲಿ ಬುಧವಾರ ಹಮ್ಮಿಕೊಂಡಿದ್ದ ಡಾ. ಹೊ. ಶ್ರೀನಿವಾಸಯ್ಯ ಅವರ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ಅವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿ ಸಿಎಂ ಮಾತನಾಡಿದರು.

ಉನ್ನತ ಹುದ್ದೆಯಲ್ಲಿದ್ದರೂ ಗಾಂಧಿ ತತ್ವ ಮೈಗೂಡಿಸಿಕೊಂಡು ಬದುಕಿದ ಪ್ರಾಮಾಣಿಕ ವ್ಯಕ್ತಿ. ಶ್ರೀನಿವಾಸಯ್ಯ ಅವರು ಸರಕಾರದಿಂದ ಏನಾದರೂ ಕೆಲಸವಾಗಬೇಕಿದ್ದರೆ ನೇರವಾಗಿ ಮನೆಗೆ ಬಂದು ಕೇಳುವಂತ ಸ್ವಭಾವದವರು. ಅವರನ್ನು ಕಳೆದುಕೊಂಡು ನಮಗೆ ಬಹಳ ದುಃಖವಾಗಿದೆ ಎಂದು ಹೇಳಿದರು.

ನಾಡೋಜ ಪಾಟೀಲ ಪುಟ್ಟಪ್ಪ ಮಾತನಾಡಿ, ‘‘ನಮ್ಮ ಬರಹಕ್ಕಿಂತ ನಾವು ಬದುಕುವ ರೀತಿ ಮುಖ್ಯವಾಗುತ್ತದೆ. ಅಂತಹ ಮಾದರಿ ಬದುಕಿಗೆ ಅಡಿಪಾಯ ಹಾಕಿಕೊಟ್ಟವರು ಶ್ರೀನಿವಾಸಯ್ಯ.



ಡಾ. ಹೊ. ಶ್ರೀನಿವಾಸಯ್ಯ ಅವರ ಭಾವಚಿತ್ರಕ್ಕೆ ಮುಖ್ಯಮಂತ್ರಿ ಸಿದ್ದರಾಮಯ್ಯ ಪುಷ್ಪನಮನ ಸಲ್ಲಿಸಿದರು. ಸಚಿವ ಎಚ್ ಕೆ ಪಾಟೀಲ್, ನಿರ್ಮಲಾನಂದ ಸ್ವಾಮೀಜಿ ಹಾಜರಿದ್ದರು.

ತಾವು ಕಷ್ಟಪಟ್ಟು ದುಡಿದ ಹಣವನ್ನು ಸಾಮಾಜಿಕ ಕಾರ್ಯಗಳಿಗೆ ವಿನಿಯೋಗಿಸಿದರು. ದೇಶದ ನಾಯಕರು ಹೇಗೆ ಬದುಕು ಸಾಗಿಸಬೇಕು ಎಂಬುದಕ್ಕೆ ಶ್ರೀನಿವಾಸಯ್ಯ ಮಾದರಿ ವ್ಯಕ್ತಿ’’ ಎಂದು ಹೇಳಿದರು.

ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್. ದೊರೆಸ್ವಾಮಿ ಮಾತನಾಡಿ, ‘‘ಆತ್ಮೀಯ ಸಹೋದರನನ್ನು ಕಳೆದುಕೊಂಡ ದುಃಖ ನನಗಾಗಿದೆ. 1942ರಲ್ಲಿ ಪರಿಚಿತರಾದ ಹೊ. ಶ್ರೀನಿವಾಸಯ್ಯ ನನಗಿಂತ ಹತ್ತು ವರ್ಷಕ್ಕೆ ಚಿಕ್ಕವರು. ಸ್ವಾತಂತ್ರ್ಯ ಚಳವಳಿ ಸಂದರ್ಭದಲ್ಲಿ ಅವರು ಹೈಸ್ಕೂಲಿನಲ್ಲಿ ಓದುತ್ತಿದ್ದರು. ಸಣ್ಣ ವಯಸ್ಸಿನಲ್ಲಿ ಪೊಲೀಸರ ಕಣ್ಣುತಪ್ಪಿಸಿ ಕರಪತ್ರಗಳನ್ನು ಹಂಚುವ ಮೂಲಕ ಸ್ವಾತಂತ್ರ್ಯ ಹೋರಾಟಕ್ಕೆ ಬೆಂಬಲವಾಗಿ ನಿಂತಿದ್ದರು. ಸಿದ್ಧವನಹಳ್ಳಿ ಕೃಷ್ಣಶರ್ಮರ ಪರಿಚಯದಿಂದ ಗಾಂಧೀಜಿ ಅವರ ವಿಚಾರಧಾರೆಗೆ ತೆರೆದುಕೊಂಡ ಶ್ರೀನಿವಾಸಯ್ಯ, ಗಾಂಧಿ ಅನುಯಾಯಿಯಾದರು’’ ಎಂದರು.

ಸಚಿವ ಎಚ್.ಕೆ. ಪಾಟೀಲ್ ಮಾತನಾಡಿ, ‘‘ಸ್ವಾತಂತ್ರ್ಯ ಹೋರಾಟಗಾರರ ಕುಟುಂಬದ ಕುಡಿ ಶ್ರೀನಿವಾಸಯ್ಯ. ಯಾವ ಕೆಲಸದಿಂದ ಸಮಾಜಕ್ಕೆ ಅನುಕೂಲ ಆಗುತ್ತದೆ ಎಂಬುದನ್ನು ಪರೋಕ್ಷವಾಗಿ ತಿಳಿಸುವ ಮೂಲಕ ನಮ್ಮಲ್ಲಿ ಕಾಯಕ ಪ್ರೀತಿಗೆ ಪ್ರೇರೇಪಿಸುತ್ತಿದ್ದರು ,’’ಎಂದರು.

ಕಾರ್ಯಕ್ರಮದಲ್ಲಿ ಆದಿಚುಂಚನಗಿರಿ ಮಠದ ಪೀಠಾಧ್ಯಕ್ಷ ನಿರ್ಮಲಾನಂದನಾಥ ಸ್ವಾಮೀಜಿ, ಕೇಂದ್ರ ಮಾಜಿ ಸಚಿವ ಎಂ.ವಿ. ರಾಜಶೇಖರನ್, ಪ್ರೊ. ರವಿವರ್ಮಾ ಕುಮಾರ್, ಕೇಂದ್ರ ಗಾಂಧಿ ಸ್ಮಾರಕ ನಿಧಿ ಸಂಸ್ಥೆ ಅಧ್ಯಕ್ಷ ಶ್ರೀರಾಮಚಂದ್ರ, ರಾಜೇಂದ್ರಸಿಂಗ್, ಹೊ. ಶ್ರೀನಿವಾಸಯ್ಯನವರ ಪುತ್ರಿ ಶಶಿಕೃಷ್ಣ ಮೊಮ್ಮಗ ಅನಿರುದ್ಧ, ಪ್ರೊ. ಎಸ್.ಜಿ. ಸಿದ್ಧರಾಮಯ್ಯ, ಶೇಷಾದ್ರಿಪುರ ಶಿಕ್ಷಣ ದತ್ತಿಯ ಡಾ. ವೂಡೇ ಪಿ ಕೃಷ್ಣ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ
ಗುರುವಾರ, 13, ಏಪ್ರಿಲ್, 2017,

# ಗಾಂಧಿ ತತ್ವಕ್ಕೆ ನಿಷ್ಠೆ ಅಚಲ



ಡಾ.ಹೊ. ಶ್ರೀನಿವಾಸಯ್ಯ ಭಾವಚಿತ್ರಕ್ಕೆ ಮುಖ್ಯಮಂತ್ರಿ ಸಿದ್ದರಾಮಯ್ಯ, ಸಚಿವ ಎಚ್.ಕೆ ಪಾಟೀಲ್, ನಿರ್ಮಲಾನಂದ ಸ್ವಾಮೀಜಿ, ಮಾಜಿ ಕೇಂದ್ರ ಸಚಿವ ಎಂ.ವಿ ರಾಜಶೇಖರನ್, ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್ ದೊರೆಸ್ವಾಮಿ ಪುಷ್ಪ ನಮನ ಸಲ್ಲಿಸಿದರು.

ಬೆಂಗಳೂರು: ಗಾಂಧಿ ತತ್ವಗಳನ್ನು ಮೈಗೂಡಿಸಿಕೊಂಡು ಜೀವನದುದ್ದಕ್ಕೂ ಹೋರಾಟ ಮಾಡಿದ ವ್ಯಕ್ತಿ ಡಾ.ಹೊ.ಶ್ರೀನಿವಾಸಯ್ಯ ಎಂದು ಮುಖ್ಯಮಂತ್ರಿ ಸಿದ್ಧರಾಮಯ್ಯ ಹೇಳಿದರು.

ಗಾಂಧಿಭವನದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಏರ್ಪಡಿಸಿದ್ದ ಡಾ.ಹೊ. ಶ್ರೀನಿವಾಸಯ್ಯ ಅವರ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿ ಮಾತನಾಡಿ, ಶ್ರೀನಿವಾಸಯ್ಯ ಅವರು ಸರ್ಕಾರದಿಂದ ಗಾಂಧಿ ಸ್ಮಾರಕ ನಿಧಿಗೆ ಏನಾದರೂ ಕೆಲಸವಾಗಬೇಕಿದ್ದರೆ ನೇರವಾಗಿ ಮನೆಗೆ ಬಂದು ಕೇಳುವಂತ ಸರಳ ಸ್ವಭಾವದವರಾಗಿದ್ದರು ಎಂದು ಗುಣಗಾನ ಮಾಡಿದರು.

**ಕರ್ನಾಟಕದ ಗಾಂಧಿ**

ಕೇಂದ್ರದ ಮಾಜಿ ಸಚಿವ ಎಂ.ವಿ ರಾಜಶೇಖರನ್ ಮಾತನಾಡಿ, ಹೊ.ಶ್ರೀನಿವಾಸಯ್ಯ ಗಾಂಧಿ ತತ್ವಾದರ್ಶಗಳನ್ನು ರಾಜ್ಯ, ರಾಷ್ಟ್ರಕ್ಕೆ ಸೀಮಿತಗೊಳಿಸದೆ ವಿಶ್ವಮಟ್ಟಕ್ಕೆ ಕೊಂಡೊಯ್ದ ವ್ಯಕ್ತಿ. ಅವರು ಬಿಟ್ಟು ಹೋಗಿರುವ ತತ್ವ ನಿಷ್ಠೆ, ಬದ್ಧತೆಯನ್ನು ಮುಂದಿನ ದಿನಗಳಲ್ಲಿ ನಿರಂತರ ಉಸಿರಾಗಿ ಬೆಳಸುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ ಎಂದರು. ಪ್ರತಿಯೊಬ್ಬರು ಅವರ ತತ್ವ ಅಳವಡಿಸಿಕೊಂಡು ನಿಷ್ಠೆಯಿಂದ ಬದುಕಬೇಕಿದೆ ಎಂದು ತಿಳಿಸಿದರು.

ಸಚಿವ ಎಚ್.ಕೆ ಪಾಟೀಲ್ ಮಾತನಾಡಿ, ಗಾಂಧೀಜಿ ಬಗ್ಗೆ ತಿಳಿಯದವರಿಗೆ ಗಾಂಧೀ ತತ್ವಗಳನ್ನು ತಿಳಿಸಿ ಅವರನ್ನು ಸೆಳೆಯುತ್ತಿದ್ದರು ಎಂದರು. ಕಾರ್ಯಕ್ರಮದಲ್ಲಿ ಆದಿಚುಂಚನಗಿರಿ ಮಠದ ನಿರ್ಮಲಾನಂದ ಸ್ವಾಮೀಜಿ, ಸಾಹಿತಿ ಪಾಟೀಲ್ ಪುಟ್ಟಪ್ಪ, ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಎಚ್.ಎಸ್ ದೊರೆಸ್ವಾಮಿ. ಎಂ.ಬಿ ಪಾಟೀಲ್, ರಾಮಚಂದ್ರ ರಾಯ್, ರಾಜೇಂದ್ರ ಸಿಂಗ್, ಡಾ. ವೂಡೇ.ಪಿ. ಕೃಷ್ಣ ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ
ಗುರುವಾರ • ಏಪ್ರಿಲ್ 13, 2017

# ಅಧ್ಯಕ್ಷರಾಗಿ ಆಯ್ಕೆ

ಬೆಂಗಳೂರು: ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾಗಿ ವೂಡೇ ಪಿ. ಕೃಷ್ಣ ಅವರು ಆಯ್ಕೆ ಆಗಿದ್ದಾರೆ. ಈ ಹಿಂದೆ ಅಧ್ಯಕ್ಷರಾಗಿದ್ದ ಹೊ.ಶ್ರೀನಿವಾಸಯ್ಯ ಅವರ ನಿಧನದಿಂದಾಗಿ ಸ್ಥಾನ ತೆರವಾಗಿತ್ತು.

ಕರ್ನಾಟಕ
ಗುರುವಾರ,13 ಏಪ್ರಿಲ್ 2017

# ಗಾಂಧಿ ಶಾಂತಿ ಪ್ರತಿಷ್ಠಾನಕ್ಕೆ ಪದಾಧಿಕಾರಿಗಳ ಆಯ್ಕೆ

ನಗರದ ಗಾಂಧಿ ಶಾಂತಿ ಪ್ರತಿಷ್ಠಾನವು 2017ನೇ ಸಾಲಿನ ಪ್ರಥಮ ಕಾರ್ಯಕಾರಿ ಸಭೆ ನಡೆಸಿದ್ದು, ಮುಂದಿನ ಮೂರು ವರ್ಷಗಳಿಗೆ ಅನ್ವಯವಾಗುವಂತೆ ಕಾರ್ಯಕಾರಿ ಸಮಿತಿ ಸದಸ್ಯರನ್ನು ನೇಮಿಸಿದೆ. ಅಧ್ಯಕ್ಷರಾಗಿ ಡಾ.ವೂಡೇ ಪಿ.ಕೃಷ್ಣ, ಉಪಾಧ್ಯಕ್ಷರಾಗಿ ಎಚ್.ಎಂ.ಶಿವಣ್ಣ, ಕಾರ್ಯದರ್ಶಿಯಾಗಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಖಜಾಂಚಿಯಾಗಿ ಪ್ರೊ.ಜಿ.ಬಿ.ಶಿವರಾಜು, ನಿರ್ದೇಶಕರಾಗಿ ಪ್ರೊ.ಚಂದ್ರಿಕಾ ಪುರಾಣಿಕ್, ಕೆ.ಜಿ.ವೆಂಕಟೇಶ್, ಪ್ರೊ.ಪ್ರತಾಪ್ ಲಿಂಗಯ್ಯ ಅವರು ಆಯ್ಕೆಯಾಗಿದ್ದಾರೆ. ಇವರು 2019ರವರೆಗೆ ಮುಂದುವರೆಯಲಿದ್ದಾರೆ ಹಾಗೂ ಆಗಾಗ್ಗೆ ಸಭೆ ನಡೆಸಿ ಪ್ರತಿಷ್ಠಾನಕ್ಕೆ ಸಂಬಂಧಿಸಿದಂತೆ, ಅಭಿವೃದ್ಧಿ ಕಾರ್ಯ ಕೈಗೊಳ್ಳಲಿದ್ದಾರೆ.

ಈ ಸಂಜೆ
ಮಂಗಳವಾರ, 11-4-2017

## ಗಾಂಧೀ ಶಾಂತಿ ಪ್ರತಿಷ್ಠಾನಕ್ಕೆ

# ವೂಡೇ ಪಿ.ಕೃಷ್ಣ ಅಧ್ಯಕ್ಷ

ಬೆಂಗಳೂರು, ಏ.11-ಬೆಂಗಳೂರಿನ ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷರಾಗಿ ಡಾ.ವೂಡೇ ಪಿ.ಕೃಷ್ಣ ಆಯ್ಕೆಯಾಗಿದ್ದಾರೆ. ಇತ್ತೀಚೆಗೆ ನಡೆದ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಪದಾಧಿಕಾರಿಗಳ ಆಯ್ಕೆ ನಡೆದಿದೆ. ಅಧ್ಯಕ್ಷರಾಗಿ ವೂಡೇ ಪಿ.ಕೃಷ್ಣ, ಉಪಾಧ್ಯಕ್ಷರಾಗಿ ಎಚ್.ಎಂ.ಶಿವಣ್ಣ, ಕಾರ್ಯದರ್ಶಿಯಾಗಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಖಜಾಂಚಿಯಾಗಿ ಪ್ರೊ.ಜಿ.ಬಿ.ಶಿವರಾಜು, ನಿರ್ದೇಶಕರಾಗಿ ಪ್ರೊ.ಚಂದ್ರಿಕಾ ಪುರಾಣಿಕ್, ಕೆ.ಜಿ. ವೆಂಕಟೇಶ್, ಪ್ರೊ.ಪ್ರತಾಪ್ ಲಿಂಗಯ್ಯ ಆಯ್ಕೆಯಾಗಿದ್ದಾರೆ.



# ಕನ್ನಡವನ್ನು ಪ್ರೀತಿಯಿಂದ ಮಕ್ಕಳಿಗೆ ಕಲಿಸಿದರೆ ಅವರು ಉನ್ನತ ಸ್ಥಾನಕ್ಕೇರುತ್ತಾರೆ: ಡಾ. ವೂಡೇ ಪಿ. ಕೃಷ್ಣ



ದೇ

ಕ

ದೆ

ಧಾನ ಕಾರ್ಯದರ್ಶಿ

ಕನ್ನಡ ಪ್ರಭ 10|4|2017



## ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರ ಪೂರ್ವರಂಗ ಕೃತಿ ಬಿಡುಗಡೆ

# ಜನಮಾನಸವನ್ನೇ ಆವರಿಸಿರುವ ಸರ್ವಜ್ಞ ವಚನ: ಡಾ. ವೂಡೇ ಕೃಷ್ಣ

• **ಕನ್ನಡಪ್ರಭ ವಾರ್ತೆ** ಮೈಸೂರು

ಸರ್ವಜ್ಞನವಚನಗಳುಇಡೀಜನಮಾನಸವನ್ನೇ ಆವರಿಸಿವೆ ಎಂದು ಬೆಂಗಳೂರಿನ ಗಾಂಧಿ ಶಾಂತಿ ಪ್ರತಿಷ್ಠಾನ ಅಧ್ಯಕ್ಷ ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ತಿಳಿಸಿದರು.

ಮೈಸೂರಿನ ಎಂಜಿ ರಸ್ತೆ ಜೆಎಸ್‌ಎಸ್ ಆಸ್ಪತ್ರೆ ಆವರಣದ ಡಾ. ಶಿವರಾತ್ರಿ ರಾಜೇಂದ್ರ ಭವನದಲ್ಲಿ ಸಂವಹನ ಪ್ರಕಾಶನವು ಹೊರ ತಂದಿರುವ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರ ಪೂರ್ವರಂಗ (ಸರ್ವಜ್ಞರ ವಚನಗಳ ಸಾಂಸ್ಕೃತಿಕ ಅನುಸಂಧಾನ) ಎಂಬ ಕೃತಿಯನ್ನು ಅವರು ಬಿಡುಗಡೆಗೊಳಿಸಿ ಮಾತನಾಡಿದರು.

ಸಾಮಾನ್ಯ ಜನರ ಜೀವನ ಆಧರಿತ ಸರ್ವಜ್ಞ ತ್ರಿಪದಿಗಳು ಅಕ್ಷರಸ್ಥರಲ್ಲದೇ ಅನಕ್ಷರಸ್ಥರನ್ನು ಸುಲಭವಾಗಿ ತಲುಪಬಲ್ಲ ಸರಳ ಸಾಹಿತ್ಯವಾಗಿದೆ. ಕನ್ನಡದಲ್ಲಿ ಸರ್ವಜ್ಞ, ತಮಿಳಿನಲ್ಲಿ ತಿರುವಳ್ಳುವರ್ ಹಾಗೂ ತೆಲುಗಿನ ವೇಮನ ಸಮಕಾಲೀನರಾಗಿದ್ದು, ಸಮಾಜದ ಅಂಕು ಡೊಂಕು ತಿದ್ದಿದ್ದಾರೆ ಎಂದು ಅವರು ಹೇಳಿದರು.

ಸರ್ವಜ್ಞರ ವಚನಗಳು ಎಂದಾಗ ಕನ್ನಡಿಗರಿಗೆ ರೋಮಾಂಚನ ಆಗುತ್ತದೆ. ಸರ್ವಜ್ಞರ ವಚನಗಳು ಜ್ಞಾನವಂತರಿಗೆ ಮಾತ್ರವಲ್ಲದೇ ಶ್ರೀಸಾಮಾನ್ಯರಿಗೂ ಅರ್ಥವಾಗುತ್ತದೆ. ನಮ್ಮಲ್ಲಿನ ವಿಶ್ವವಿದ್ಯಾನಿಲಯಗಳು ಮತ್ತು ವಿದ್ಯಾಸಂಸ್ಥೆ ವ್ಯಾಪಕ ಆಗದಿದ್ದರೂ ವಚನಗಳು ದೇಶದಲ್ಲಿ ವ್ಯಾಪಕವಾಗಿವೆ ಎಂದು ಅವರು ತಿಳಿಸಿದರು.

ವಿದ್ಯಾ ಸಂಸ್ಥೆಗಳಲ್ಲಿ ಕಲಿಯುವ ಶಿಕ್ಷಣಕ್ಕಿಂತಲೂ ವಚನಗಳು ಸಾಮಾನ್ಯರನ್ನು ಸುಶಿಕ್ಷಿತರನ್ನಾಗಿ ಮಾಡಿವೆ. ಸರ್ವಜ್ಞನ ತ್ರಿಪದಿಗಳಲ್ಲಿ 16ನೇ ಶತಮಾನದಲ್ಲಿದ್ದ ಮೂಢನಂಬಿಕೆ, ಕಂದಾಚಾರಗಳನ್ನು ಕಠಿಣ ಭಾಷೆಯ ಮೂಲಕ ಖಂಡಿಸಿ ಸಮಾಜಕ್ಕೆ ಎಚ್ಚರಿಕೆ ನೀಡಿದ್ದಾರೆ. ಆಧ್ಯಾತ್ಮಿಕ ಹಾಗೂ ಸಾಂಸಾರಿಕ ಜೀವನವನ್ನು ಉನ್ನತ ಮಟ್ಟದಲ್ಲಿ ನಡೆಸಲು ಸರಳ ಸೂತ್ರಗಳನ್ನು ನೀಡಿದ್ದಾರೆ ಎಂದರು.

ಸಾಂಸ್ಕೃತಿಕ ಸಂವಾದವನ್ನು ಹುಟ್ಟುಹಾಕುವ ಶಕ್ತಿ ಕೃತಿಗಳಿಗಿರಬೇಕು. ಪ್ರಾಥಮಿಕ ಹಂತದಲ್ಲಿ ಮಕ್ಕಳಲ್ಲಿ ಕನ್ನಡ ಭಾಷೆಯ ಮೇಲೆ ಪ್ರೀತಿ ಬೆಳೆಸುವ ಗುರುತರ ಜವಾಬ್ದಾರಿ ಶಿಕ್ಷಕರ ಮೇಲಿದ್ದು, ಮುಂದಿನ ಜನಾಂಗವನ್ನು ಕನ್ನಡಕ್ಕೆ ಕೊಡುಗೆಯಾಗಿ ನೀಡಬೇಕು ಎಂದು ಅವರು ಆಶಿಸಿದರು.

ಜೆಎಸ್‌ಎಸ್ ಮಹಾವಿದ್ಯಾಪೀಠ ಪ್ರಕಟಣ ವಿಭಾಗ ನಿರ್ದೇಶಕ ಪ್ರೊ. ಮೊರಬದ ಮಲ್ಲಿಕಾರ್ಜುನ ಕೃತಿ ಕುರಿತು ಮಾತನಾಡಿ, ಪೂರ್ವರಂಗ ಕೃತಿಯು ಅತ್ಯುತ್ತಮವಾಗಿದೆ. ಈ ಕೃತಿಯು ವಾಚ್ಯಕ್ಕಿಂತ ಸೂಚ್ಯವಾಗಿ ಹೇಳುತ್ತದೆ ಎಂದರು.

ಹಿರಿಯ ವಿದ್ವಾಂಸ ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ ಅಧ್ಯಕ್ಷತೆ ವಹಿಸಿದ್ದರು. ಕರ್ನಾಟಕ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ, ಸಂವಹನ ಪ್ರಕಾಶನದ ಪ್ರಕಾಶಕ ಡಿ.ಎನ್. ಲೋಕಪ್ಪ ಇದ್ದರು.




ಮೈಸೂರಿನಲ್ಲಿ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರ ಪೂರ್ವರಂಗ ಕೃತಿಯನ್ನು ಡಾ. ವೂಡೇ ಪಿ. ಕೃಷ್ಣ ಬಿಡುಗಡೆಗೊಳಿಸಿದರು. ಡಿ.ಎನ್. ಲೋಕಪ್ಪ, ಪ್ರೊ. ಮೊರಬದ ಮಲ್ಲಿಕಾರ್ಜುನ, ಡಾ.ಟಿ.ವಿ. ವೆಂಕಟಾಚಲಶಾಸ್ತ್ರಿ ಇದ್ದರು.

ವಿಜಯವಾಣಿ

ದಿನದ ಚಿತ್ರ 10-4-17



## 'ಪೂರ್ವರಂಗ' ಕೃತಿ ಬಿಡುಗಡೆ

ನಗರದಲ್ಲಿ ಭಾನುವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಸಂವಹನ ಪ್ರಕಾಶನದಿಂದ ಹೊರ ತರಲಾದ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ ಅವರ 'ಪೂರ್ವರಂಗ' ಕೃತಿಯನ್ನು ಡಾ.ವೂಡೇ ಪಿ.ಕೃಷ್ಣ ಬಿಡುಗಡೆ ಮಾಡಿದರು.

ವಿಶ್ವವಾಣಿ
10.04.2017



ಪೂರ್ವರಂಗ ಕೃತಿಯನ್ನು ಶೇಷಾದ್ರಿಪುರಂ ಶಿಕ್ಷಣದತ್ತಿ ಸಂಸ್ಥೆ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಬಿಡುಗಡೆ ಮಾಡಿದರು.

# ಪೂರ್ವರಂಗ ಕೃತಿ ಬಿಡುಗಡೆ

ಮೈಸೂರು: ಸಂವಹನ ಪ್ರಕಾಶನ ಪ್ರಕಟಿತ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ ಅವರ ಪೂರ್ವರಂಗ (ಸರ್ವಜ್ಞನ ವಚನಗಳ ಸಾಂಸ್ಕೃತಿಕ ಅನುಸಂಧಾನ) ಕೃತಿಯನ್ನು ಲೋಕಾರ್ಪಣೆ ಮಾಡಲಾಯಿತು.

ಶಿವರಾತ್ರಿ ರಾಜೇಂದ್ರ ಭವನದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಬೆಂಗಳೂರಿನ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಬಿಡುಗಡೆಗೊಳಿಸಿ ದರು. ಬಳಿಕ ಮಾತನಾಡಿ, ಸರ್ವಜ್ಞನ ವಚನ ಎಂದಾಗ ಕನ್ನಡಿಗರಿಗೆ ರೋಮಾಂಚನ ಆಗುತ್ತದೆ. ಜ್ಞಾನವಂತ ರಿಗೆ ಮಾತ್ರವಲ್ಲ, ಶ್ರೀಸಾಮಾನ್ಯರಿಗೂ ಅರ್ಥವಾಗುತ್ತದೆ ಎಂದರು.

ಪ್ರಕಟಣಾ ವಿಭಾಗ ನಿರ್ದೇಶಕ ಪ್ರೊ. ಮೊರಬದ ಮಲ್ಲಿಕಾರ್ಜುನ ಮಾತನಾಡಿ, ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರ ಪೂರ್ವರಂಗ ಕೃತಿಯು 3 ಅಂಶಗಳನ್ನು ಒಳಗೊಂಡಿದೆ.

ಈ ಪೈಕಿ ಸಾಂಸ್ಕೃತಿಕ ಹೊಸ ಹೊಸ ಸಂವಾದ ಹುಟ್ಟು ಹಾಕಿದರೆ, ಅದು ಹೊಸ ಕೃತಿ ಆಗುತ್ತದೆ ಎಂದು ಹೇಳಿದರು. ಹಿರಿಯ ವಿದ್ವಾಂಸ ಡಾ.ಟಿ.ವಿ. ವೆಂಕಟಾಚಲಶಾಸ್ತ್ರೀ, ಲೇಖಕ ಹಾಗೂ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಸಂವಹನ ಪ್ರಕಾಶನದ ಪ್ರಕಾಶಕ ಡಿ. ಎನ್.ಲೋಕಪ್ಪ ಇದ್ದರು.

ಆಂದೋಲನ
10.04.2017

# ಸರ್ವಜ್ಞನ ಅಧ್ಯಯನಕ್ಕೆ 'ಪೂರ್ವರಂಗ' ಹೊಸದಾರಿ

## ಕೃತಿ ಬಿಡುಗಡೆ ಸಮಾರಂಭದಲ್ಲಿ ಪ್ರೊ.ಮೊರಬದ ಮಲ್ಲಿಕಾರ್ಜುನ ಅಭಿಮತ



ಮೈಸೂರಿನ ಜೆಎಸ್‌ಎಸ್ ಆಸ್ಪತ್ರೆಯ ಆವರಣದಲ್ಲಿರುವ ಡಾ.ಶ್ರೀ ಶಿವರಾತ್ರಿ ರಾಜೇಂದ್ರ ಭವನದಲ್ಲಿ ಭಾನುವಾರ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರ ಪೂರ್ವರಂಗ ಕೃತಿಯನ್ನು ಡಾ.ವೂಡೇ ಪಿ.ಕೃಷ್ಣ ಅವರು ಬಿಡುಗಡೆ. ಡಾ.ಟಿ.ವಿ. ವೆಂಕಟಾಚಲ ಶಾಸ್ತ್ರೀ, ಪ್ರೊ.ಮೊರಬದ ಮಲ್ಲಿಕಾರ್ಜುನ, ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರನ್ನು ಚಿತ್ರದಲ್ಲಿ ಕಾಣಬಹುದು.

ಮೈಸೂರು,ಏ.೯– ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರ ಪೂರ್ವರಂಗ ಕೃತಿ ಸರ್ವಜ್ಞನ ಅಧ್ಯಯನಕ್ಕೆ ಹೊಸ ದಾರಿಯನ್ನು ಸೃಷ್ಟಿಸಿದೆ ಎಂದು ಜೆಎಸ್‌ಎಸ್ ಮಹಾವಿದ್ಯಾಪೀಠದ ಪ್ರಕಟಣ ವಿಭಾಗದ ನಿರ್ದೇಶಕ ಪ್ರೊ.ಮೊರಬದ ಮಲ್ಲಿಕಾರ್ಜುನ ಹೇಳಿದರು.

ನಗರದ ಜೆಎಸ್‌ಎಸ್ ಆಸ್ಪತ್ರೆಯ ಶ್ರೀ ಶಿವರಾತ್ರಿ ರಾಜೇಂದ್ರ ಭವನದಲ್ಲಿ ಭಾನುವಾರ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಸಂವಹನ ಪ್ರಕಾಶನದ ವತಿಯಿಂದ ಹೊರತಂದಿರುವ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ ಅವರ 'ಪೂರ್ವರಂಗ (ಸರ್ವಜ್ಞನ ವಚನಗಳ ಸಾಂಸ್ಕೃತಿಕ ಅನುಸಂಧಾನ)' ಕೃತಿ ಬಿಡುಗಡೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಸಾಮಾಜಿಕ ಅಧ್ಯಯನಕ್ಕೆ ಸರ್ವಜ್ಞ ಅತ್ಯಂತ ಅವಶ್ಯ. ಸರ್ವಜ್ಞನ ಒಟ್ಟು ಜೀವನದ ಆಯಾಮವನ್ನು ಈ ಕೃತಿಯಲ್ಲಿ ಚಿತ್ರಿಸಲಾಗಿದೆ. ಪೂರ್ವರಂಗ ಒಂದು ಸಾಂಸ್ಕೃತಿಕ ಸಂವಾದವನ್ನು ಹುಟ್ಟು ಹಾಕುವ ಕೃತಿಯಾಗಿದೆ ಎಂದು ಅವರು ಅಭಿಪ್ರಾಯಪಟ್ಟರು.

ಬೆಂಗಳೂರಿನ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಕೃತಿ ಬಿಡುಗಡೆಗೊಳಿಸಿ ಮಾತನಾಡಿ, ಮಲ್ಲೇಪುರಂ ಅವರು ಬರೆದಿರುವ ಪೂರ್ವರಂಗ ಕೃತಿಯ ಪ್ರತಿಯೊಂದು ಅಧ್ಯಾಯವೂ ಹೊಸತನ್ನು ಕೊಟ್ಟಿದೆ ಎಂದರು.

ಹಿರಿಯ ವಿದ್ವಾಂಸ ಡಾ.ಟಿ.ವಿ.ವೆಂಕಟಾಚಲಶಾಸ್ತ್ರೀ, ಲೇಖಕ ಹಾಗೂ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಸಂವಹನ ಪ್ರಕಾಶನದ ಪ್ರಕಾಶಕ ಡಿ.ಎನ್.ಲೋಕಪ್ಪ ಮುಂತಾದವರು ಭಾಗವಹಿಸಿದ್ದರು.

ಮೈಸೂರು ಮಿತ್ರ
10.04.2017

# 'ಪೂರ್ವರಂಗ' ಸರ್ವಜ್ಞ ವಚನಗಳ ಸಾಂಸ್ಕೃತಿಕ ಅನುಸಂಧಾನ ಕೃತಿ ಬಿಡುಗಡೆ

ಮೈಸೂರು, ಏ.9(ಪಿಎಂ)– ಅಕ್ಷರಸ್ಥರು ಮಾತ್ರವಲ್ಲದೆ, ಅನಕ್ಷರಸ್ಥರನ್ನೂ ವ್ಯಾಪಿಸುವಲ್ಲಿ ಯಶಸ್ವಿಯಾಗಿರುವ ಸರ್ವಜ್ಞನ ವಚನಗಳು ಕನ್ನಡಿಗರಲ್ಲಿ ರೋಮಾಂಚನ ಉಂಟು ಮಾಡಿವೆ ಎಂದು ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆ ಪ್ರಧಾನ ಕಾರ್ಯದರ್ಶಿ ಮತ್ತು ಬೆಂಗಳೂರು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಅಭಿಪ್ರಾಯಪಟ್ಟರು.

ಸಂವಹನ ಪ್ರಕಾಶನದ ವತಿಯಿಂದ ಜೆಎಸ್‌ಎಸ್ ಹಳೇ ಆಸ್ಪತ್ರೆ ಆವರಣದ ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಭವನದಲ್ಲಿ ಭಾನುವಾರ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರ 'ಪೂರ್ವರಂಗ' ಸರ್ವಜ್ಞ ವಚನಗಳ ಸಾಂಸ್ಕೃತಿಕ ಅನುಸಂಧಾನ ಕೃತಿ ಬಿಡುಗಡೆಗೊಳಿಸಿ ಅವರು ಮಾತನಾಡಿದರು.

ಸರ್ವಜ್ಞನ ವಚನಗಳು ಇಡೀ ಕನ್ನಡ ನಾಡಿನ ಜನಮಾನಸದಲ್ಲಿ ಆವರಿಸಿದೆ. ಕನ್ನಡ ನಾಡಿನಲ್ಲಿ ಸರ್ವಜ್ಞ ತನ್ನ ವಚನಗಳ ಮೂಲಕ ಸಮಾಜ ಸುಧಾರಣೆಗೆ ಒತ್ತು ನೀಡಿದಂತೆ ತಮಿಳಿನಲ್ಲಿ ತಿರುವಳ್ಳುವರ್ ಹಾಗೂ ತೆಲುಗಿನಲ್ಲಿ ವೇಮನನ ಸಾಹಿತ್ಯಗಳು ಸಮಾಜದ ನ್ಯೂನತೆಗಳನ್ನು ಎತ್ತಿ ಹಿಡಿದು ಸರಿ ದಾರಿಯತ್ತ ಸಾಗಲು ಕೊಡುಗೆ ನೀಡಿವೆ. ಈ ಮೂವರು ಕವಿಗಳಲ್ಲೂ ಸಾಮ್ಯತೆ ಕಾಣಬಹುದು. ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರ ಪೂರ್ವರಂಗ ಕೃತಿಯ ಪ್ರತಿಯೊಂದು ಅಧ್ಯಾಯವು ಹೊಸತನ್ನು ಕೊಟ್ಟಿದೆ ಮೆಚ್ಚುಗೆ ವ್ಯಕ್ತಪಡಿಸಿದರು.

ಕೃತಿ ಕುರಿತು ಮಾತನಾಡಿದ ಜೆಎಸ್‌ಎಸ್ ಮಹಾವಿದ್ಯಾಪೀಠದ ಪ್ರಕಟಣಾ ವಿಭಾಗದ ನಿರ್ದೇಶಕ ಪ್ರೊ.ಮೊರಬದ ಮಲ್ಲಿಕಾರ್ಜುನ, ಸಾಮಾಜಿಕ ಅಧ್ಯಯನಕ್ಕೆ ಸರ್ವಜ್ಞ ಅತ್ಯಂತ ಅವಶ್ಯಕ. ಸರ್ವಜ್ಞನ ಒಟ್ಟು ಜೀವನದ ಆಯಾಮವನ್ನು ಈ ಕೃತಿಯಲ್ಲಿ ಚಿತ್ರಿಸಲಾಗಿದೆ. ಪೂರ್ವರಂಗ ಒಂದು ಸಾಂಸ್ಕೃತಿಕ ಸಂವಾದವನ್ನು ಹುಟ್ಟು ಹಾಕುವ ಕೃತಿಯಾಗಿ ಮೂಡಿಬಂದಿದೆ ಎಂದರು. ಹಿರಿಯ ವಿದ್ವಾಂಸ ಡಾ.ಟಿ.ವಿ. ವೆಂಕಟಾಚಲ ಶಾಸ್ತ್ರೀ, ಕೃತಿ ಕರ್ತೃಗಳೂ ಆದ ಕರ್ನಾಟಕ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಸಂವಹನ ಪ್ರಕಾಶನದ ಪ್ರಕಾಶಕ ಡಿ.ಎನ್.ಲೋಕಪ್ಪ ಮತ್ತಿತರರು ಹಾಜರಿದ್ದರು.



ಮೈಸೂರಿನ ಜೆಎಸ್‌ಎಸ್ ಆಸ್ಪತ್ರೆ ಆವರಣದ ಡಾ.ಶ್ರೀಶಿವರಾತ್ರಿ ರಾಜೇಂದ್ರ ಭವನದಲ್ಲಿ, ಪೂರ್ವರಂಗ, ಕೃತಿಯನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಬಿಡುಗಡೆ ಮಾಡಿದರು. ವಿದ್ವಾಂಸ ಡಾ.ಟಿ.ವಿ.ವೆಂಕಟಾಚಲಶಾಸ್ತ್ರೀ, ಕೃತಿ ಕರ್ತೃ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಸಂವಹನ ಪ್ರಕಾಶನದ ಪ್ರಕಾಶಕ ಡಿ.ಎನ್.ಲೋಕಪ್ಪ ಮತ್ತಿತರರಿದ್ದಾರೆ.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ
VIJAYAVANI MYSURU
ಸೋಮವಾರ
10 ಏಪ್ರಿಲ್ 2017
10 APRIL 2017
ಮೈಸೂರು

ದಿನದ ಚಿತ್ರ

ವಿಜಯವಾಣಿ ಚಿತ್ರ



## 'ಪೂರ್ವರಂಗ' ಕೃತಿ ಬಿಡುಗಡೆ

ನಗರದಲ್ಲಿ ಭಾನುವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಸಂವಹನ ಪ್ರಕಾಶನದಿಂದ ಹೊರ ತರಲಾದ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ ಅವರ 'ಪೂರ್ವರಂಗ' ಕೃತಿಯನ್ನು ಡಾ.ವೂಡೇ ಪಿ.ಕೃಷ್ಣ ಬಿಡುಗಡೆ ಮಾಡಿದರು.

ವಿಶ್ವವಾಣಿ ಸುದ್ದಿಮನೆ
ಬೆಂಗಳೂರು
vishwavani.news
10.04.2017 ಸೋಮವಾರ



ಪೂರ್ವರಂಗ ಕೃತಿಯನ್ನು ಶೇಷಾದ್ರಿಪುರಂ ಶಿಕ್ಷಣದತ್ತಿ ಸಂಸ್ಥೆ ಪ್ರಧಾನ ಕಾರ್ಯದರ್ಶಿ ಡಾ.ವೊಡೇ ಪಿ.ಕೃಷ್ಣ ಬಿಡುಗಡೆ ಮಾಡಿದರು.

# ಪೂರ್ವರಂಗ ಕೃತಿ ಬಿಡುಗಡೆ

**ಮೈಸೂರು:** ಸಂವಹನ ಪ್ರಕಾಶನ ಪ್ರಕಟಿತ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ ಅವರ ಪೂರ್ವರಂಗ (ಸರ್ವಜ್ಞನ ವಚನಗಳ ಸಾಂಸ್ಕೃತಿಕ ಅನುಸಂಧಾನ) ಕೃತಿಯನ್ನು ಲೋಕಾರ್ಪಣೆ ಮಾಡಲಾಯಿತು.

ಶಿವರಾತ್ರಿ ರಾಜೇಂದ್ರ ಭವನದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಬೆಂಗಳೂರಿನ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೊಡೇ ಪಿ.ಕೃಷ್ಣ ಬಿಡುಗಡೆಗೊಳಿಸಿ ದರು. ಬಳಿಕ ಮಾತನಾಡಿ, ಸರ್ವಜ್ಞನ ವಚನ ಎಂದಾಗ ಕನ್ನಡಿಗರಿಗೆ ರೋಮಾಂಚನ ಆಗುತ್ತದೆ. ಜ್ಞಾನವಂತರಿಗೆ ಮಾತ್ರವಲ್ಲ, ಶ್ರೀಸಾಮಾನ್ಯರಿಗೂ ಅರ್ಥವಾಗುತ್ತದೆ ಎಂದರು.

ಪ್ರಕಟಣ ವಿಭಾಗ ನಿರ್ದೇಶಕ ಪ್ರೊ. ಮೊರಬದ ಮಲ್ಲಿಕಾರ್ಜುನ ಮಾತನಾಡಿ, ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರ ಪೂರ್ವರಂಗ ಕೃತಿಯು 3 ಅಂಶಗಳನ್ನು ಒಳಗೊಂಡಿದೆ.

ಈ ಪೈಕಿ ಸಾಂಸ್ಕೃತಿಕ ಹೊಸ ಹೊಸ ಸಂವಾದ ಹುಟ್ಟು ಹಾಕಿದರೆ, ಅದು ಹೊಸ ಕೃತಿ ಆಗುತ್ತದೆ ಎಂದು ಹೇಳಿದರು. ಹಿರಿಯ ವಿದ್ವಾಂಸ ಡಾ.ಟಿ.ವಿ. ವೆಂಕಟಾಚಲಶಾಸ್ತ್ರೀ, ಲೇಖಕ ಹಾಗೂ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಸಂವಹನ ಪ್ರಕಾಶನದ ಪ್ರಕಾಶಕ ಡಿ. ಎನ್.ಲೋಕಪ್ಪ ಇದ್ದರು.

೨.೧೦, ೨೦೧೭ ಆಂದೋಲನ ಮೈಸೂರು

# ಸರ್ವಜ್ಞನ ಅಧ್ಯಯನಕ್ಕೆ 'ಪೂರ್ವರಂಗ' ಹೊಸದಾರಿ

## ಕೃತಿ ಬಿಡುಗಡೆ ಸಮಾರಂಭದಲ್ಲಿ ಪ್ರೊ.ಮೊರಬದ ಮಲ್ಲಿಕಾರ್ಜುನ ಅಭಿಮತ



ಮೈಸೂರಿನ ಜೆಎಸ್‌ಎಸ್ ಆಸ್ಪತ್ರೆಯ ಆವರಣದಲ್ಲಿರುವ ಡಾ.ಶ್ರೀ ಶಿವರಾತ್ರಿ ರಾಜೇಂದ್ರ ಭವನದಲ್ಲಿ ಭಾನುವಾರ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರ ಪೂರ್ವರಂಗ ಕೃತಿಯನ್ನು. ಡಾ.ವೂಡೇ ಪಿ.ಕೃಷ್ಣ ಅವರು ಬಿಡುಗಡೆ. ಡಾ.ಟಿ.ವಿ. ವೆಂಕಟಾಚಲ ಶಾಸ್ತ್ರೀ, ಪ್ರೊ.ಮೊರಬದ ಮಲ್ಲಿಕಾರ್ಜುನ, ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರನ್ನು ಚಿತ್ರದಲ್ಲಿ ಕಾಣಬಹುದು.

ಮೈಸೂರು,ಏ.೯– ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರ ಪೂರ್ವರಂಗ ಕೃತಿ ಸರ್ವಜ್ಞನ ಅಧ್ಯಯನಕ್ಕೆ ಹೊಸ ದಾರಿಯನ್ನು ಸೃಷ್ಟಿಸಿದೆ ಎಂದು ಜೆಎಸ್‌ಎಸ್ ಮಹಾವಿದ್ಯಾಪೀಠದ ಪ್ರಕಟಣ ವಿಭಾಗದ ನಿರ್ದೇಶಕ ಪ್ರೊ.ಮೊರಬದ ಮಲ್ಲಿಕಾರ್ಜುನ ಹೇಳಿದರು.

ನಗರದ ಜೆಎಸ್‌ಎಸ್ ಆಸ್ಪತ್ರೆಯ ಶ್ರೀ ಶಿವರಾತ್ರಿ ರಾಜೇಂದ್ರ ಭವನದಲ್ಲಿ ಭಾನುವಾರ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಸಂವಹನ ಪ್ರಕಾಶನದ ವತಿಯಿಂದ ಹೊರತಂದಿರುವ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ ಅವರ ಪೂರ್ವರಂಗ (ಸರ್ವಜ್ಞನ ವಚನಗಳ ಸಾಂಸ್ಕೃತಿಕ ಅನುಸಂಧಾನ) ಕೃತಿ ಬಿಡುಗಡೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಸಾಮಾಜಿಕ ಅಧ್ಯಯನಕ್ಕೆ ಸರ್ವಜ್ಞ ಅತ್ಯಂತ ಅವಶ್ಯ. ಸರ್ವಜ್ಞನ ಒಟ್ಟು ಜೀವನದ ಆಯಾಮವನ್ನು ಈ ಕೃತಿಯಲ್ಲಿ ಚಿತ್ರಿಸಲಾಗಿದೆ. ಪೂರ್ವರಂಗ ಒಂದು ಸಾಂಸ್ಕೃತಿಕ ಸಂವಾದವನ್ನು ಹುಟ್ಟು ಹಾಕುವ ಕೃತಿಯಾಗಿದೆ ಎಂದು ಅವರು ಅಭಿಪ್ರಾಯಪಟ್ಟರು.

ಬೆಂಗಳೂರಿನ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಕೃತಿ ಬಿಡುಗಡೆಗೊಳಿಸಿ ಮಾತನಾಡಿ, ಮಲ್ಲೇಪುರಂ ಅವರು ಬರೆದಿರುವ ಪೂರ್ವರಂಗ ಕೃತಿಯ ಪ್ರತಿಯೊಂದು ಅಧ್ಯಾಯವೂ ಹೊಸತನ್ನು ಕೊಟ್ಟಿದೆ ಎಂದರು.

ಹಿರಿಯ ವಿದ್ವಾಂಸ ಡಾ.ಟಿ.ವಿ.ವೆಂಕಟಾಚಲಶಾಸ್ತ್ರೀ, ಲೇಖಕ ಹಾಗೂ ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಸಂವಹನ ಪ್ರಕಾಶನದ ಪ್ರಕಾಶಕ ಡಿ.ಎನ್.ಲೋಕಪ್ಪ ಮುಂತಾದವರು ಭಾಗವಹಿಸಿದ್ದರು.

ಮೈಸೂರು ಮಿತ್ರ

ಸೋಮವಾರ 10 ಏಪ್ರಿಲ್ 201

# 'ಪೂರ್ವರಂಗ' ಸರ್ವಜ್ಞ ವಚನಗಳ ಸಾಂಸ್ಕೃತಿಕ ಅನುಸಂಧಾನ ಕೃತಿ ಬಿಡುಗಡೆ

ಮೈಸೂರು, ಏ.9(ಪಿಎಂ)– ಅಕ್ಷರಸ್ಥರು ಮಾತ್ರವಲ್ಲದೆ, ಅನಕ್ಷರಸ್ಥರನ್ನೂ ವ್ಯಾಪಿಸುವಲ್ಲಿ ಯಶಸ್ವಿಯಾಗಿರುವ ಸರ್ವಜ್ಞನ ವಚನಗಳು ಕನ್ನಡಿಗರಲ್ಲಿ ರೋಮಾಂಚನ ಉಂಟು ಮಾಡಿವೆ ಎಂದು ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆ ಪ್ರಧಾನ ಕಾರ್ಯದರ್ಶಿ ಮತ್ತು ಬೆಂಗಳೂರು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಅಭಿಪ್ರಾಯಪಟ್ಟರು.

ಸಂವಹನ ಪ್ರಕಾಶನದ ವತಿಯಿಂದ ಜೆಎಸ್‌ಎಸ್ ಹಳೇ ಆಸ್ಪತ್ರೆ ಆವರಣದ ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಭವನದಲ್ಲಿ ಭಾನುವಾರ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರ 'ಪೂರ್ವರಂಗ' ಸರ್ವಜ್ಞ ವಚನಗಳ ಸಾಂಸ್ಕೃತಿಕ ಅನುಸಂಧಾನ ಕೃತಿ ಬಿಡುಗಡೆಗೊಳಿಸಿ ಅವರು ಮಾತನಾಡಿದರು.



ಮೈಸೂರಿನ ಜೆಎಸ್‌ಎಸ್ ಆಸ್ಪತ್ರೆ ಆವರಣದ ಡಾ.ಶ್ರೀಶಿವರಾತ್ರಿ ರಾಜೇಂದ್ರ ಭವನದಲ್ಲಿ, ಪೂರ್ವರಂಗ, ಕೃತಿಯನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ಬಿಡುಗಡೆ ಮಾಡಿದರು. ವಿದ್ವಾಂಸ ಡಾ.ಟಿ.ವಿ.ವೆಂಕಟಾಚಲಶಾಸ್ತ್ರೀ, ಕೃತಿ ಕರ್ತೃ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಸಂವಹನ ಪ್ರಕಾಶನದ ಪ್ರಕಾಶಕ ಡಿ.ಎನ್.ಲೋಕಪ್ಪ ಮತ್ತಿತರರಿದ್ದಾರೆ.

ಸರ್ವಜ್ಞನ ವಚನಗಳು ಇಡೀ ಕನ್ನಡ ನಾಡಿನ ಜನಮಾನಸದಲ್ಲಿ ಆವರಿಸಿದೆ, ಕನ್ನಡ ನಾಡಿನಲ್ಲಿ ಸರ್ವಜ್ಞ ತನ್ನ ವಚನಗಳ ಮೂಲಕ ಸಮಾಜ ಸುಧಾರಣೆಗೆ ಒತ್ತು ನೀಡಿದಂತೆ ತಮಿಳಿನಲ್ಲಿ ತಿರುವಳ್ಳುವರ್ ಹಾಗೂ ತೆಲುಗಿನಲ್ಲಿ ವೇಮನನ ಸಾಹಿತ್ಯಗಳು ಸಮಾಜದ ನ್ಯೂನತೆಗಳನ್ನು ಎತ್ತಿ ಹಿಡಿದು ಸರಿ ದಾರಿಯತ್ತ ಸಾಗಲು ಕೊಡುಗೆ ನೀಡಿವೆ. ಈ ಮೂವರು ಕವಿಗಳಲ್ಲೂ ಸಾಮ್ಯತೆ ಕಾಣಬಹುದು. ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್ ಅವರ ಪೂರ್ವರಂಗ ಕೃತಿಯ ಪ್ರತಿಯೊಂದು ಅಧ್ಯಾಯವು ಹೊಸತನ್ನು ಕೊಟ್ಟಿದೆ ಮೆಚ್ಚುಗೆ ವ್ಯಕ್ತಪಡಿಸಿದರು.

ಕೃತಿ ಕುರಿತು ಮಾತನಾಡಿದ ಜೆಎಸ್‌ಎಸ್ ಮಹಾವಿದ್ಯಾಪೀಠದ ಪ್ರಕಟಣ ವಿಭಾಗದ ನಿರ್ದೇಶಕ ಪ್ರೊ.ಮೊರಬದ ಮಲ್ಲಿಕಾರ್ಜುನ, ಸಾಮಾಜಿಕ ಅಧ್ಯಯನಕ್ಕೆ ಸರ್ವಜ್ಞ ಅತ್ಯಂತ ಅವಶ್ಯಕ. ಸರ್ವಜ್ಞನ ಒಟ್ಟು ಜೀವನದ ಆಯಾಮವನ್ನು ಈ ಕೃತಿಯಲ್ಲಿ ಚಿತ್ರಿಸಲಾಗಿದೆ. ಪೂರ್ವರಂಗ ಒಂದು ಸಾಂಸ್ಕೃತಿಕ ಸಂವಾದವನ್ನು ಹುಟ್ಟು ಹಾಕುವ ಕೃತಿಯಾಗಿ ಮೂಡಿಬಂದಿದೆ ಎಂದರು. ಹಿರಿಯ ವಿದ್ವಾಂಸ ಡಾ.ಟಿ.ವಿ. ವೆಂಕಟಾಚಲ ಶಾಸ್ತ್ರೀ, ಕೃತಿ ಕರ್ತೃಗಳೂ ಆದ ಕರ್ನಾಟಕ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಸಂವಹನ ಪ್ರಕಾಶನದ ಪ್ರಕಾಶಕ ಡಿ.ಎನ್.ಲೋಕಪ್ಪ ಮತ್ತಿತರರು ಹಾಜರಿದ್ದರು.

ವಿಜಯ ಕರ್ನಾಟಕ VK ಸೋಮವಾರ , 10 ಏಪ್ರಿಲ್ 2017, ಮೈಸೂರು

# ಸರ್ವಜ್ಞ ವಚನಗಳ ಪಾತ್ರ ಹಿರಿದು

■ ವಿಕ ಸುದ್ದಿಲೋಕ ಮೈಸೂರು

ಸಮಾಜದ ಅಂಕು ಡೊಂಕು ತಿದ್ದುವಲ್ಲಿ ಸರ್ವಜ್ಞನ ವಚನಗಳು ಪ್ರಮುಖ ಪಾತ್ರ ವಹಿಸಿವೆ ಎಂದು ಬೆಂಗಳೂರಿನ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಹೇಳಿದರು.

ಡಾ.ಶಿವರಾತ್ರಿ ರಾಜೇಂದ್ರ ಭವನದಲ್ಲಿ ಭಾನುವಾರ ಸಂವಹನ ಪ್ರಕಾಶನ ವತಿಯಿಂದ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ್ ಅವರ 'ಪೂರ್ವರಂಗ' (ಸರ್ವಜ್ಞ ವಚನಗಳ ಸಾಂಸ್ಕೃತಿಕ ಅನುಸಂಧಾನ) ಕೃತಿಯನ್ನು ಬಿಡುಗಡೆಗೊಳಿಸಿ ಅವರು ಮಾತನಾಡಿದರು.

''ಸರ್ವಜ್ಞನ ವಚನಗಳು ಸಾಮಾನ್ಯ ಜನರ ಜೀವನವನ್ನು ಆಧರಿಸಿದೆ. ಸರ್ವಜ್ಞನ ತ್ರಿಪದಿಗಳು ಅಕ್ಷರಸ್ಥರಲ್ಲದೇ ಅನಕ್ಷರಸ್ಥರನ್ನೂ ತಲುಪುವಷ್ಟು ಸರಳವಾಗಿವೆ. ಸರ್ವಜ್ಞನ ವಚನಗಳು ಇಡೀ ಜನಮಾನಸವನ್ನೇ ಆವರಿಸಿವೆ,'' ಎಂದರು.

''ಸರ್ವಜ್ಞ ತ್ರಿಪದಿಗಳಲ್ಲಿ 16ನೇ ಶತಮಾನದಲ್ಲಿದ್ದ ಕಂದಾಚಾರಗಳನ್ನು ಕಠಿಣ ಭಾಷೆಯ ಮೂಲಕ ಖಂಡಿಸಿದರು. ಅವರು ಆಧ್ಯಾತ್ಮಿಕ, ಸಾಂಸಾರಿಕ ಜೀವನವನ್ನು ಸುಧಾರಿಸಲು ಸರಳ ಸೂತ್ರಗಳನ್ನು ನೀಡಿದರು. ತಮಿಳಿಗೆ ತಿರುವಳ್ಳುವರ್, ತೆಲುಗಿಗೆ ವೇಮನ ಇರುವಂತೆ ಕನ್ನಡದ ಸರ್ವಜ್ಞರು ಸಮಾಜವನ್ನು ತಿದ್ದಲು ಶ್ರಮಿಸಿದರು,'' ಎಂದು ಹೇಳಿದರು.

ಜೆಎಸ್‌ಎಸ್ ಮಹಾವಿದ್ಯಾಪೀಠದ ಪ್ರಕಟಣಾ ವಿಭಾಗದ ನಿರ್ದೇಶಕ ಪ್ರೊ. ಮೊರಬದ ಮಲ್ಲಿಕಾರ್ಜುನ ಮಾತನಾಡಿ, ''ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರು ರಚಿಸಿರುವ ಪೂರ್ವರಂಗ ಕೃತಿ ಅತ್ಯುತ್ತಮವಾಗಿದೆ. ವಾಚ್ಯಕ್ಕಿಂತ ಈ ಕೃತಿ ಸೂಚ್ಯವಾಗಿ ಹಲವು ವಿಷಯ ಹೇಳುತ್ತದೆ,'' ಎಂದರು.

ವಿದ್ವಾಂಸ ಡಾ.ಟಿ.ವಿ. ವೆಂಕಟಾಚಲ ಶಾಸ್ತ್ರೀ, ಲೇಖಕ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಸಂವಹನ ಪ್ರಕಾಶನದ ಪ್ರಕಾಶಕ ಡಿ.ಎನ್.ಲೋಕಪ್ಪ ಇದ್ದರು.

ವಿಕ ಚಿತ್ರಲೋಕ



ಡಾ.ಶಿವರಾತ್ರಿ ರಾಜೇಂದ್ರ ಭವನದಲ್ಲಿ ಭಾನುವಾರ ಸಂವಹನ ಪ್ರಕಾಶನ ವತಿಯಿಂದ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್ ಅವರ 'ಪೂರ್ವರಂಗ' ಕೃತಿ ಬಿಡುಗಡೆ ಮಾಡಲಾಯಿತು. ಡಾ.ವೂಡೇ ಪಿ.ಕೃಷ್ಣ, ಪ್ರೊ.ಮೊರಬದ ಮಲ್ಲಿಕಾರ್ಜುನ, ಡಾ.ಟಿ.ವಿ.ವೆಂಕಟಾಚಲ ಶಾಸ್ತ್ರೀ ಇತರರು ಇದ್ದರು.

ವಿಜಯ ಕರ್ನಾಟಕ VK

ಶುಕ್ರವಾರ,7 ಏಪ್ರಿಲ್ 2017, ಬೆಂಗಳೂರು

### ಸ್ವಇಚ್ಛೆಯಂತೆ ಎಂ.ಎಸ್.ರಾಮಯ್ಯ ಆಸ್ಪತ್ರೆಗೆ ಪಾರ್ಥಿವ ಶರೀರ ದಾನ

# ಗಾಂಧಿವಾದಿ ಹೊ. ಶ್ರೀನಿವಾಸಯ್ಯ ಇನ್ನಿಲ್ಲ

• ವಿಕ ಸುದ್ದಿಲೋಕ ಬೆಂಗಳೂರು

ಹಿರಿಯ ಗಾಂಧಿವಾದಿ, ಸ್ವಾತಂತ್ರ್ಯ ಹೋರಾಟಗಾರ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ. ಹೊ ಶ್ರೀನಿವಾಸಯ್ಯ (93) ಅವರು ಅನಾರೋಗ್ಯದಿಂದ ಕೊನೆಯುಸಿರೆಳೆದರು. ಎರಡು ವಾರಗಳ ಹಿಂದೆ ಹೃದಯ ಸಮಸ್ಯೆಯಿಂದಾಗಿ ಜಯದೇವ ಆಸ್ಪತ್ರೆಗೆ ದಾಖಲಾಗಿದ್ದ ಅವರಿಗೆ, ವಯೋಸಹಜವಾಗಿ ಮೂತ್ರ ಪಿಂಡ ತೊಂದರೆ ಕಾಣಿಸಿಕೊಂಡಿತ್ತು. ಆದರೆ, ಚಿಕಿತ್ಸೆ ಫಲಿಸದೆ ಗುರುವಾರ ಬೆಳಗ್ಗೆ 5.30ಕ್ಕೆ ಇಹಲೋಕ ತ್ಯಜಿಸಿದರು.

ನಾಗಮಂಗಲ ತಾಲೂಕಿನ ಚೌಧರಿ ಕೊಪ್ಪಲು ಗ್ರಾಮದಲ್ಲಿ 1925ರ ಜ.4ರಂದು ಜನಿಸಿದ್ದ ಹೊ. ಶ್ರೀನಿವಾಸಯ್ಯ ಬಿ.ಇ. ಪದವೀಧರರಾಗಿದ್ದರು. ಕೆಲವರ್ಷಗಳ ಮಟ್ಟಿಗೆ ಎಚ್‌ಎಎಲ್‌ನಲ್ಲಿ ಅಧಿಕಾರಿಯಾಗಿದ್ದ ಅವರು, ನಂತರ ಬಿಇಎಂಎಲ್‌ನಲ್ಲಿ ದಶಕಗಳ ಕಾಲ ಉಪವ್ಯವಸ್ಥಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದರು. ಕಳೆದ ನಾಲ್ಕು ದಶಕಗಳಿಂದ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. ಬೆಂಗಳೂರಿನ ಗಾಂಧಿ ಭವನವನ್ನು ಪುನರುಜ್ಜೀವನಗೊಳಿಸಿದ್ದರು.

1942ರಿಂದ 1947ರವರೆಗೆ ದೇಶದ ಸ್ವಾತಂತ್ರ್ಯ ಚಳವಳಿ ತುತ್ತ ತುದಿಯಲ್ಲಿದ್ದಾಗ ರಹಸ್ಯವಾಗಿ ಪತ್ರಿಕೆಗಳನ್ನು ಪ್ರಕಟಿಸಿ, ಹಂಚುತ್ತಿದ್ದರು. ಜತೆಗೆ, ಬ್ರಿಟಿಷರ ವಿರುದ್ಧ ಕೈಬಾಂಬ್ ಇಟ್ಟು ಜೈಲುವಾಸ ಅನುಭವಿಸಿದ್ದರು. 1946ರಲ್ಲಿ ನಡೆದ ವಿದ್ಯಾರ್ಥಿಗಳ 'ವಂದೇ ಮಾತರಂ' ಸಂಗ್ರಾಮದಲ್ಲೂ ಅವರು ಪಾಲ್ಗೊಂಡಿದ್ದರು. ಆದರೆ, ಮುಂದೆ ಸರಕಾರಗಳು ಸ್ವಾತಂತ್ರ್ಯ ಹೋರಾಟಗಾರರಿಗೆ ಕೊಡುವ ಯಾವ ಸವಲತ್ತುಗಳನ್ನೂ ಅವರು ಸ್ವೀಕರಿಸಿರಲಿಲ್ಲ.

ಮಹಾತ್ಮ ಗಾಂಧೀಜಿ ಕುರಿತು ಮಕ್ಕಳಿಗೆ ಬರೆದ '... ನಮ್ಮ ತಾತ' ಕೃತಿಯ ಎರಡು ಲಕ್ಷಕ್ಕೂ ಹೆಚ್ಚು ಪ್ರತಿಗಳು ಮಾರಾಟವಾಗಿವೆ. ಅವರ 'ನಾನು ಕಂಡ ಜರ್ಮನಿ' ಕೃತಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರಕ್ಕೆ ಪಾತ್ರವಾಗಿದೆ. ಅವರು ತಮ್ಮಲ್ಲಿದ್ದ 20 ಸಾವಿರಕ್ಕೂ ಹೆಚ್ಚು ಪುಸ್ತಕಗಳನ್ನು ಗಾಂಧಿ ಭವನಕ್ಕೆ ದಾನ ಮಾಡಿದ್ದರು. 1940-50ರ ನಡುವೆ ವಿದ್ಯಾರ್ಥಿ ಕಾಂಗ್ರೆಸ್‌ನ ಚುಕ್ಕಾಣಿ ಹಿಡಿದಿದ್ದ ಅವರು, ಮಹಾತ್ಮ ಗಾಂಧೀಜಿ ಪ್ರತಿಪಾದಿಸಿದ ಪ್ರಕೃತಿ ಚಿಕಿತ್ಸೆಯಲ್ಲೂ ಪರಿಣತಿ ಸಾಧಿಸಿದ್ದರು. ತಮ್ಮ ಹುಟ್ಟೂರನ್ನು ಮಾದರಿ ಗ್ರಾಮವಾಗಿ ಅಭಿವೃದ್ಧಿಪಡಿಸಿದ್ದರು.

ಮೈಸೂರು ವಿ.ವಿಯ ಗೌರವ ಡಾಕ್ಟರೇಟ್, ರಾಜ್ಯ ಸರಕಾರದ 'ಪತಂಜಲಿ ಸುವರ್ಣ ಪದಕ', ಕೆಂಪೇಗೌಡ ಪ್ರಶಸ್ತಿ, 2015ರಲ್ಲಿ ರಾಜ್ಯ ಸರಕಾರದ 'ಗಾಂಧಿ ಸೇವಾ ಪ್ರಶಸ್ತಿ' ಮುಂತಾದ ಹತ್ತುಹಲವು ಪುರಸ್ಕಾರಗಳಿಗೆ ಪಾತ್ರರಾಗಿದ್ದರು.

**ಅಂತಿಮ ದರ್ಶನ:** ಪಾರ್ಥಿವ ಶರೀರವನ್ನು ಸಾರ್ವಜನಿಕರ ಅಂತಿಮ ದರ್ಶನಕ್ಕಾಗಿ ಬೆಳಗ್ಗೆ 9ರಿಂದ ಮಧ್ಯಾಹ್ನ 12ರವರೆಗೆ ಮಲ್ಲೇಶ್ವರಂನಲ್ಲಿರುವ ಅವರ ನಿವಾಸ ಹಾಗೂ ಸಂಜೆ 7 ಗಂಟೆಯವರೆಗೆ ಗಾಂಧಿ ಭವನದಲ್ಲಿ ಇಡಲಾಗಿತ್ತು.

**ಸರಕಾರಿ ಗೌರವ:** ರಾಜ್ಯ ಸರಕಾರದ ಪರವಾಗಿ ಪೊಲೀಸರು 21 ಸುತ್ತು ಕುಶಾಲತೋಪುಗಳನ್ನು ಹಾರಿಸಿದರು. ಬಳಿಕ ಎಂ ಎಸ್ ರಾಮಯ್ಯ ಆಸ್ಪತ್ರೆಯವರು ಪಾರ್ಥಿವ ಶರೀರ ಸ್ವೀಕರಿಸಿದರು. ಕೆಲವರ್ಷಗಳ ಹಿಂದೆ ನಿಧನರಾದ ಇವರ ಪತ್ನಿಯ ಪಾರ್ಥಿವ ಶರೀರವನ್ನೂ ಇದೇ ಆಸ್ಪತ್ರೆಗೆ ದಾನ ಮಾಡಲಾಗಿತ್ತು.



ಡಾ.ಹೊ ಶ್ರೀನಿವಾಸಯ್ಯ ಅವರ ಅಂತಿಮ ದರ್ಶನ ಪಡೆದ ಆದಿಚುಂಚನಗಿರಿ ಮಠದ ಶ್ರೀ ನಿರ್ಮಲಾನಂದನಾಥ ಸ್ವಾಮೀಜಿ.



ಕುಪ್ಪಳಿಯ ಕವಿಶೈಲದಲ್ಲಿ ಡಾ.ಹೊ ಶ್ರೀನಿವಾಸಯ್ಯ

● ಶ್ರೀನಿವಾಸಯ್ಯ ನಿಧನದಿಂದ ಮನಸ್ಸಿಗೆ ಬಹಳ ನೋವಾಗಿದೆ. ದೇವರು ಅವರ ಆತ್ಮಕ್ಕೆ ಶಾಂತಿ ನೀಡಲಿ.

**-ಎಚ್.ಡಿ.ದೇವೇಗೌಡ** ಮಾಜಿ ಪ್ರಧಾನಿ

○ ಸರಳತೆ ಬೋಧಿಸಲು ಸುಲಭ, ಪಾಲಿಸಲು ಕಷ್ಟ ಎಂಬುದನ್ನು ಮನಗಂಡಿದ್ದ ಶ್ರೀನಿವಾಸಯ್ಯ ಮೊದಲು ಸರಳತಾ ದೀಕ್ಷೆ ಪಡೆದರು. ಖಾದಿ ಬಟ್ಟೆ ತೊಟ್ಟು ಜಾತ್ಯತೀತ ನಿಲುವಿಗೆ ಬದ್ಧರಾಗಿದ್ದರು.

**-ಸಿದ್ದರಾಮಯ್ಯ** ಮುಖ್ಯಮಂತ್ರಿ

● ಸರಳ ಜೀವನದ ಮೂಲಕ ಗಾಂಧಿ ತತ್ವಗಳನ್ನು ಇಂದಿನ ಯುವ ಪೀಳಿಗೆಗೆ ತಲುಪಿಸುತ್ತಿದ್ದ ಹಿರಿಯರನ್ನು ಕಳೆದುಕೊಂಡು ಇಡೀ ಸಮಾಜ ಬಡವಾಗಿದೆ.

**-ಯಡಿಯೂರಪ್ಪ** ಬಿಜೆಪಿ ರಾಜ್ಯಾಧ್ಯಕ್ಷ

○ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾಗಿ 4 ದಶಕಗಳ ಕಾಲ ಸೇವೆ ಸಲ್ಲಿಸಿ ಗಾಂಧೀಜಿಯವರ ಚಿಂತನೆಗಳನ್ನು ಮುಂದಿನ ಪೀಳಿಗೆಗೆ ಪರಿಚಯಿಸುವ ಕೆಲಸ ಮಾಡಿದ್ದ ಇವರ ಅಗಲಿಕೆ ದೇಶ ಹಿರಿಯ ಗಾಂಧಿವಾದಿಯನ್ನು ಕಳೆದುಕೊಂಡಂತೆ ಆಗಿದೆ.

**-ಅನಂತ್ ಕುಮಾರ್** ಕೇಂದ್ರ ಸಚಿವ

## ಅವರೊಬ್ಬ ರೋಲ್ ಮಾಡೆಲ್!



ಡಾ. ಹೊ ಶ್ರೀನಿವಾಸಯ್ಯ ಅವರ ಜತೆ 25 ವರ್ಷಗಳಿಂದ ನಿಕಟ ಸಂಬಂಧ ಹೊಂದಿದ್ದೆ. ಮುಖ್ಯವಾಗಿ, ಗಾಂಧಿ ಸ್ಮಾರಕ ನಿಧಿಯ ಪ್ರತಿಯೊಂದು ಚಟುವಟಿಕೆಗಳ ಹಿಂದೆಯೂ ಅವರ ದೊಡ್ಡ ಶಕ್ತಿ ಇದ್ದೇ ಇರುತ್ತಿತ್ತು. ಅವರ ನಿಧನದಿಂದಾಗಿ ಗಾಂಧಿ ಬಳಗದ ಮಿತ್ರರನ್ನು ಶೂನ್ಯಭಾವ ಆವರಿಸಿದೆ.

ಮದ್ಯಪಾನ ನಿಷೇಧ, ಹರಿಜನೋದ್ಧಾರ, ಖಾದಿ ಅವಲಂಬನೆ, ಪ್ರಕೃತಿ ಚಿಕಿತ್ಸೆ ಸಹಕಾರ ತತ್ವ, ಆಧ್ಯಾತ್ಮಿಕ ಮನೋಭಾವ, ವ್ಯಾಪಕವಾದ ವಿಶ್ವಪ್ರಜ್ಞೆ... ಗಾಂಧೀಜಿ ಪ್ರತಿಪಾದಿಸಿದ ವಿಚಾರಗಳು. ಇವೆಲ್ಲವನ್ನೂ ಶ್ರೀನಿವಾಸಯ್ಯನವರು ವ್ರತದಂತೆ ಪಾಲಿಸುತ್ತಿದ್ದರು. ವಿದ್ಯಾರ್ಥಿಯಾಗಿದ್ದಾಗಲೇ ಎರಡು ಬಾರಿ ಗಾಂಧೀಜಿ ದರ್ಶನ ಪಡೆದಿದ್ದ ಅವರು, ಅಂದಿನಿಂದಲೂ ಚರಕದ ಬಗ್ಗೆ ರಚನಾತ್ಮಕ ದೃಷ್ಟಿಕೋನ ಹೊಂದಿದ್ದರು. ಕೊನೆಯುಸಿರುಇರುವವರೆಗೂ ಖಾದಿಧಾರಿಗಳಾಗಿದ್ದರು.

ಯಾವುದನ್ನೂ ಜಾತಿ-ಮತಗಳ, ಊರು-ಸೀಮೆಗಳ ಸೀಮಿತ ಚೌಕಟ್ಟಿನಲ್ಲಿ ನೋಡುತ್ತಿರಲಿಲ್ಲ. "ನಾವೆಲ್ಲರೂ ಈ ವಿಶ್ವಕ್ಕೆ ಸೇರಿದವರು. ಹೀಗಾಗಿ ಒಂದು ಹಂತದ ನಂತರ ಸೀಮಿತ ಎಲ್ಲೆಗಳನ್ನು ಮೀರಿ, ಪೂರ್ಣದೃಷ್ಟಿಯನ್ನು ಬೆಳೆಸಿಕೊಳ್ಳಬೇಕು," ಎನ್ನುತ್ತಿದ್ದರು. ಗಾಂಧೀಜಿ ಪ್ರತಿಪಾದಿಸಿದ ಸರ್ವೋದಯ ತತ್ವಕ್ಕೆ ಅನುಗುಣವಾಗಿರುವ ಜೀವನದೃಷ್ಟಿ ಇದು.

ಯುವಕರಿಗೆ ರೋಲ್ ಮಾಡೆಲ್‌ಗಳೇ ಇಲ್ಲದಂತಹ ದುಷ್ಕಾಲವಿದು. ಆದರೆ, ಶ್ರೀನಿವಾಸಯ್ಯನವರು ಸದಾ ಯುವಜನರ ಒಳಿತಿನ ಬಗ್ಗೆಯೇ ಗಾಢವಾಗಿ ಆಲೋಚಿಸುತ್ತಿದ್ದರು. ನಮ್ಮ ಯುವಜನರಿಗೆ ಗಾಂಧೀಜಿಯವರಂಥ ಧೀಮಂತರ ಮತ್ತು ಋಷಿಸಮಾನರ ವಿಚಾರಗಳನ್ನು ದಾಟಿಸಿ, ಮನದಟ್ಟು ಮಾಡಿಕೊಡಬೇಕು ಎಂದು ಅವರು ಸದಾ ತುಡಿಯುತ್ತಿದ್ದರು. ಈ ಅರ್ಥದಲ್ಲಿ ಅವರೇ ನಮ್ಮ ಇಂದಿನ ಕಿರಿಯರಿಗೆ ರೋಲ್ ಮಾಡೆಲ್ ಆಗಿದ್ದರು!

ಯಾವ ಅಧಿಕಾರ/ಪದವಿಯನ್ನೂ ಅಪೇಕ್ಷಿಸಿದವರಲ್ಲ. ಕೆಲವರ್ಷಗಳ ಹಿಂದೆ ಬಿಜೆಪಿ ಸರಕಾರವಿದ್ದಾಗ ಅವರನ್ನು ಎಂಎಲ್‌ಸಿಯನ್ನಾಗಿ ಮಾಡಲು ತೀರ್ಮಾನಿಸಲಾಗಿತ್ತು. ಆಗ "ಅವೆಲ್ಲ ನನಗೆ ಬೇಡಪ್ಪ ನಾನು 1947ರ ಕಾಂಗ್ರೆಸ್‌ಗೆ ಸೇರಿದವನು...." ಎಂದು ನಯವಾಗಿ ನಿರಾಕರಿಸಿದ್ದರು.

**-ಡಾ. ವೂಡೆ ಪಿ ಕೃಷ್ಣ** ಕಾರ್ಯಾಧ್ಯಕ್ಷರು, ಕರ್ನಾಟಕ ಗಾಂಧಿ ಸ್ಮಾರಕ ನಿಧಿ

ಈ ಸಂಜೆ

ಗುರುವಾರ, 06 ಏಪ್ರಿಲ್, 2017



ಗಾಂಧಿ ಭವನದಲ್ಲಿ ಅಂತಿಮ ದರ್ಶನಕ್ಕೆ ಇಡಲಾಗಿರುವ ಹೊ.ಶ್ರೀನಿವಾಸಯ್ಯ ಅವರ ಪಾರ್ಥಿವ ಶರೀರಕ್ಕೆ ಮೂಡೆ.ಪಿ.ಕೃಷ್ಣ ಹಾಗೂ ಸ್ವಾತಂತ್ರ್ಯ ಹೋರಾಟಗಾರರು, ಗಾಂಧಿವಾದಿಗಳು ನಮನ ಸಲ್ಲಿಸಿದರು.

# ಮಹಾನ್ ಚೇತನಕ್ಕೆ ಗಣ್ಯರ ಸಂತಾಪ

ಬೆಂಗಳೂರು,ಏ.6-ಹಿರಿಯ ಗಾಂಧಿವಾದಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ಹೊ.ಶ್ರೀನಿವಾಸಯ್ಯ ಅವರ ನಿಧನಕ್ಕೆ ಮುಖ್ಯಮಂತ್ರಿ ಸಿದ್ದರಾಮಯ್ಯ, ಮಾಜಿ ಪ್ರಧಾನಿ ಎಚ್.ಡಿ.ದೇವೇಗೌಡ, ಜೆಡಿಎಸ್ ಜ್ಯಾಧ್ಯಕ್ಷ ಎಚ್.ಡಿ.ಕುಮಾರಸ್ವಾಮಿ, ಪಿ ರಾಜ್ಯಾಧ್ಯಕ್ಷ ಬಿ.ಎಸ್.ಯಡಿಯೂರಪ್ಪ ಸೇರಿದಂತೆ ಹಲವು ಗಣ್ಯರು ತೀವ್ರ ಸಂತಾಪ ಸೂಚಿಸಿದ್ದಾರೆ.

ವಿಧಾನಸಭೆಯ ಪ್ರತಿಪಕ್ಷದ ನಾಯಕ ಜಗದೀಶ್ ಶೆಟ್ಟರ್, ಗ್ರಾಮೀಣಾಭಿವೃದ್ಧಿ ಸಚಿವ ಎಚ್.ಕೆ.ಪಾಟೀಲ್, ವಸತಿ ಸಚಿವ ಎಂ.ಕೃಷ್ಣಪ್ಪ, ಕಂದಾಯ ಸಚಿವ ಕಾಗೋಡು ತಿಮ್ಮಪ್ಪ, ಕೆಪಿಸಿಸಿ ಅಧ್ಯಕ್ಷ ಡಾ.ಜಿ.ಪರಮೇಶ್ವರ್, ಸಚಿವರಾದ ರಾಮಲಿಂಗಾರೆಡ್ಡಿ, ಕೆ.ಜೆ.ಜಾರ್ಜ್, ರೋಷನ್ ಬೇಗ್, ಕೃಷ್ಣ ಭೈರೇಗೌಡ, ಆಂಜನೇಯ ಸೇರಿದಂತೆ ಅನೇಕ ಸಚಿವರು ಹಾಗೂ ಗಣ್ಯರು ಹೊ.ಶ್ರೀನಿವಾಸಯ್ಯ ಅವರ ನಿಧನಕ್ಕೆ ಶ್ರದ್ಧಾಂಜಲಿ ಸಲ್ಲಿಸಿದ್ದಾರೆ.

ಹಿರಿಯ ಸ್ವಾತಂತ್ರ್ಯ ಹೋರಾಟಗಾರ ದೊರೆಸ್ವಾಮಿ, ಕೇಂದ್ರ ಸಚಿವರಾದ ಅನಂತಕುಮಾರ್, ಸದಾನಂದಗೌಡ, ಮಾಜಿ/ ರಾಜ್ಯಸಭಾ ಸದಸ್ಯ ಎಂ.ವಿ.ರಾಜಶೇಖರನ್, ಮಾಜಿ ಉಪ ಮುಖ್ಯಮಂತ್ರಿ ಆರ್.ಅಶೋಕ್, ಮಾಜಿ ಸಚಿವ ವಿ.ಸೋಮಣ್ಣ, ಮಾಜಿ ಕೇಂದ್ರ ಸಚಿವ ಜಾಫರ್ ಷರೀಫ್, ಮೇಯರ್ ಜಿ.ಪದ್ಮಾವತಿ, ಬಿಬಿಎಂಪಿ ಪ್ರತಿಪಕ್ಷದ ನಾಯಕ ಪದ್ಮನಾಭ ರೆಡ್ಡಿ , ಮೂಡೆ ಪಿ.ಕೃಷ್ಣ ಸೇರಿದಂತೆ ನಾಡಿನ ಹಲವಾರು ಗಣ್ಯರು ಆಗಲಿದ ಮಹಾನ್ ಚೇತನಕ್ಕೆ ನಮನ ಸಲ್ಲಿಸಿದ್ದಾರೆ.

ಗಾಂಧೀಜಿಯವರ ಸರಳತೆ, ಸಿದ್ಧಾಂತದಿಂದ ಆಕರ್ಷಿತರಾಗಿದ್ದ ಶ್ರೀನಿವಾಸಯ್ಯ ಅವರು ಸರಳತಾ ಧೀಕ್ಷೆ ಪಡೆದು ಖಾದಿ ಬಟ್ಟೆ ಧರಿಸಿದರು. ಜಾತ್ಯತೀತ ನಿಲುವಿಗೆ ಬದ್ಧರಾಗಿ ಗಾಂಧೀಜಿಯವರ ಸಂದೇಶಗಳನ್ನು ಪ್ರಚುರಪಡಿಸಲು ಟೊಂಕಕಟ್ಟಿ ನಿಂತಿದ್ದರು ಎಂದು ಸಿದ್ದರಾಮಯ್ಯ ಗುಣಗಾನ ಮಾಡಿದರು.

ಮಹಾತ್ಮಗಾಂಧೀಜಿಯವರ 150ನೇ ಜನ್ಮ ದಿನಾಚರಣೆ ಸಂದರ್ಭದಲ್ಲಿ ವರ್ಷವಿಡೀ ಕಾರ್ಯಕ್ರಮಗಳನ್ನು ರೂಪಿಸಿದ್ದರು ಎಂದು ಸ್ಮರಿಸಿದ್ದಾರೆ.

ಶ್ರೀನಿವಾಸಯ್ಯ ಅವರ ನಿಧನದಿಂದ ಮನಸ್ಸಿಗೆ ಬಹಳ ನೋವಾಗಿದ್ದು, ಒಬ್ಬ ಅಪ್ಪಟ ಗಾಂಧಿವಾದಿಯನ್ನು ಕಳೆದುಕೊಂಡಂತಾಗಿದೆ ಎಂದು ದೇವೇಗೌಡರು ವಿಷಾದಿಸಿದ್ದಾರೆ.

ಕನ್ನಡ ನಾಡು ಕಂಡ ಒಬ್ಬ ಗಾಂಧಿವಾದಿ ಶ್ರೀನಿವಾಸಯ್ಯ ಅವರ ಅಗಲಿಕೆಯ ಸುದ್ದಿ ತಮಗೆ ಅಪಾರ ನೋವುಂಟು ಮಾಡಿದೆ ಎಂದು ಕುಮಾರಸ್ವಾಮಿ ವಿಷಾದಿಸಿದ್ದಾರೆ.

ಗಾಂಧಿ ವಿಚಾರಧಾರೆಗಳ ಪ್ರಚಾರಕ್ಕೆ ತಮ್ಮನ್ನು ತೊಡಗಿಸಿಕೊಂಡಿದ್ದ ಶ್ರೀನಿವಾಸಯ್ಯ ಅವರು ಕೊನೆಯುಸಿರು ಇರುವವರೆಗೂ ಗಾಂಧಿತತ್ವ ಅಳವಡಿಸಿಕೊಂಡಿದ್ದರು.

ತಾವು ಮುಖ್ಯಮಂತ್ರಿಯಾಗಿದ್ದ ಅವಧಿಯಲ್ಲಿ ಗಾಂಧಿ ಸ್ಮಾರಕ ನಿಧಿಗೆ ಒಂದು ಕೋಟಿ ರೂ. ನೆರವು ನೀಡಿ ಅತ್ಯಂತ ಕಡಿಮೆ ಅವಧಿಯಲ್ಲಿ ಉತ್ತಮ ವೈಚಾರಿಕ ಕೇಂದ್ರವನ್ನಾಗಿ ಗಾಂಧಿಭವನವನ್ನು ರೂಪಿಸಲಾಯಿತು ಎಂದರು.

ರೈತಪರ ಕಾಳಜಿ ಹೊಂದಿದ್ದ ಅವರು ನಾನಾ ಸಂಘಸಂಸ್ಥೆಗಳ ಪದಾಧಿಕಾರಿಯಾಗಿ ನಿಸ್ವಾರ್ಥ ಸೇವೆಯಿಂದ ಆ ಸಂಸ್ಥೆಗಳನ್ನು ಉನ್ನತ ಮಟ್ಟಕ್ಕೆ ಕೊಂಡೊಯ್ದಿದ್ದರು.

ಶ್ರೀನಿವಾಸಯ್ಯ ಅವರ ನಿಧನದಿಂದ ನಮ್ಮ ದೇಶ ಒಬ್ಬ ಅಪ್ರತಿಮ ಸಮಾಜಮುಖಿ ವ್ಯಕ್ತಿಯನ್ನು ಕಳೆದುಕೊಂಡಿದೆ. ಅವರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಕುಟುಂಬ ವರ್ಗ ಮತ್ತು ಅಪಾರ ಅಭಿಮಾನಿಗಳಿಗೆ ದುಃಖ ಭರಿಸುವ ಶಕ್ತಿ ಭಗವಂತ ನೀಡಲಿ ಎಂದು ಪ್ರಾರ್ಥಿಸಿದ್ದಾರೆ.

# ಮಂಡ್ಯ

ಪ್ರಜಾವಾಣಿ

ಸೋಮವಾರ ಮಾರ್ಚ್ 13, 2017

### ಕೃತಿ ಲೋಕಾರ್ಪಣೆ ಹಾಗೂ ಪ್ರಶಸ್ತಿ ಪ್ರದಾನ ಕಾರ್ಯಕ್ರಮದಲ್ಲಿ ವೂಡೇ ಪಿ. ಕೃಷ್ಣ ಅಭಿಮತ

# ರೈತರ ಬದುಕು ಹಸನಾದರೆ ದೇಶ ಅಭಿವೃದ್ಧಿ

ಪ್ರಜಾವಾಣಿ ವಾರ್ತೆ

ಮಂಡ್ಯ: 'ಬಡತನವು ದೇಶದ ಸಮಸ್ಯೆ ಆಗಿದೆ. ಅದರ ನಿರ್ಮೂಲನೆಗೆ ರೈತರ ಬದುಕು ಹಸನಾಗಬೇಕು ಎಂದು ಗಾಂಧೀಜಿ ಅವರು ಹೇಳಿದ್ದರು' ಎಂದು ಚಿಂತಕ ವೂಡೇ ಪಿ. ಕೃಷ್ಣ ಹೇಳಿದರು.

ನಗರದ ಗಾಂಧಿ ಭವನದಲ್ಲಿ ದಿವಂಗತ ಎಸ್.ವಿಶ್ವನಾಥ್ ಸಂಸ್ಮರಣಾ ಸಮಿತಿ ಹಾಗೂ ಮಹಾತ್ಮಗಾಂಧಿ ಸ್ಮಾರಕ ಟ್ರಸ್ಟ್ ಭಾನುವಾರ ಆಯೋಜಿಸಿದ್ದ 'ಮಹಾತ್ಮರ ಬದುಕು' ಕೃತಿ ಲೋಕಾರ್ಪಣೆ ಹಾಗೂ ಪ್ರಶಸ್ತಿ ಪ್ರದಾನ ಕಾರ್ಯಕ್ರಮದಲ್ಲಿ ಪ್ರಶಸ್ತಿ ಸ್ವೀಕರಿಸಿ ಅವರು ಮಾತನಾಡಿದರು.

ಗಾಂಧೀಜಿ ಅವರ ಹೋರಾಟದ ಮಾರ್ಗಗಳು ಇಂದಿಗೂ ಪ್ರಸ್ತುತ ಆಗಿವೆ. ಬಡತನ ನಿವಾರಣೆ ಹಾಗೂ ರೈತರ ಬದುಕು ಹಸನುಗೊಳಿಸಲು ಅದೇ ಮಾರ್ಗದಲ್ಲಿ ಸಾಗಬೇಕಿದೆ ಎಂದರು.

'ಗಾಂಧಿ ಅವರ ಬದುಕು ಪಾರದರ್ಶಕವಾಗಿತ್ತು. ನನ್ನ ಜೀವನವೇ ನನ್ನ ಸಂದೇಶ ಎಂದು ಹೇಳಿಕೊಂಡ ಮಹಾನ್ ನಾಯಕ ಗಾಂಧೀಜಿ. ಬ್ರಿಟಿಷರು ನನ್ನ ದೇಶದಲ್ಲಿ ಇದ್ದುಕೊಂಡು ನನ್ನ ವಿರುದ್ಧ ಆದೇಶ ಮಾಡಲು ಬಿಡುವುದಿಲ್ಲ ಎಂದು ಧೈರ್ಯವಾಗಿ ಹೇಳುವ ಮೂಲಕ ಹೋರಾಟದ ಬಿಸಿ ಮುಟ್ಟಿಸಿದ್ದರು' ಎಂದು ಸ್ಮರಿಸಿಕೊಂಡರು.

ಮಾತೃಭಾಷೆಗೆ ಹೆಚ್ಚು ಒತ್ತು ಕೊಟ್ಟರೆ ದೇಶ ಸಮೃದ್ಧಿ ಆಗುತ್ತದೆ. ಪ್ರತಿಯೊಬ್ಬರೂ ಭಾಷಾಭಿಮಾನ ಬೆಳೆಸಿಕೊಳ್ಳಬೇಕು. ವ್ಯವಹಾರ, ಮಾತು ಮಾತೃಭಾಷೆಯಲ್ಲಿರಬೇಕು. ಎಲ್ಲರೂ ಕನ್ನಡ ಭಾಷೆಯನ್ನು ಗೌರವಿಸುವ ಅಗತ್ಯ ಇದೆ ಎಂದು ಸಲಹೆ ನೀಡಿದರು.

ಗಾಂಧಿವಾದಿ ದಿವಂಗತ ಎಸ್.ವಿಶ್ವನಾಥ್ ಅವರ ಹೆಸರಿನ ಪ್ರಶಸ್ತಿ ನೀಡಿರುವುದು ನನಗೆ ಗೌರವ ತಂದು ಕೊಟ್ಟಿದೆ. ಇಂದು (ಭಾನುವಾರ) ಉಪ್ಪಿನ ಸತ್ಯಾಗ್ರಹ ನಡೆದ ದಿನವಾಗಿದೆ. ಈ ದಿನ ನನಗೆ ಗೌರವ ಸಿಕ್ಕಿರುವ ಸಂತೋಷ ತಂದಿದೆ' ಎಂದರು.

'ದಂಡಿ ಸತ್ಯಾಗ್ರಹ ಒಂದು ನೆನಪು' ಎಂಬ ವಿಷಯ ಕುರಿತು ಮಾತನಾಡಿದ ಹಿರಿಯ ಪತ್ರಕರ್ತ ಜಗದೀಶ್‌ಕೊಪ್ಪ ಮಾತನಾಡಿ, ಸ್ವಾತಂತ್ರ್ಯ ಹೋರಾಟದ ಮೂಲಕ ಗಾಂಧೀಜಿ ಅವರು ಬ್ರಿಟಿಷರಿಗೆ ಭಯ ಹುಟ್ಟಿಸಿದ ಮಹಾನ್ ನಾಯಕರಾಗಿದ್ದರು. ಅಹಿಂಸಾ ಮಾರ್ಗ ಬೋಧಿಸುವ ಮೂಲಕ ಹಿಂಸೆ ತ್ಯಜಿಸಲು ಜನರಿಗೆ ತಿಳಿಹೇಳಿದ್ದರು ಎಂದರು.

ಮಹಾತ್ಮಗಾಂಧಿ ಸ್ಮಾರಕ ಟ್ರಸ್ಟ್ ಅಧ್ಯಕ್ಷ ಜಿ. ಮಾದೇಗೌಡ ಅಧ್ಯಕ್ಷತೆ ವಹಿಸಿದ್ದರು. ಕಾರ್ಯದರ್ಶಿ ಜಿ.ಬಿ. ಶಿವರಾಜು, ಕರ್ನಾಟಕ ಗೆಜೆಟಿಯರ್ ನಿವೃತ್ತ ಸಂಪಾದಕ ಎಸ್. ರಾಜೇಂದ್ರಪ್ಪ, ಗಾಂಧಿ ಚಿಂತಕ ವೇಮುಗಲ್ ಸೋಮಶೇಖರ್, ಸಾಗರದ ವೈ.ವ. ದಂತಿ, ಜಯಮ್ಮ ವಿಶ್ವನಾಥ್, ಜೆ.ವಿ. ಪೂರ್ಣಿಮಾ ಲಿಂಗರಾಜು ಉಪಸ್ಥಿತರಿದ್ದರು.



ಮಂಡ್ಯದ ಗಾಂಧಿ ಭವನದಲ್ಲಿ ಭಾನುವಾರ ನಡೆದ ಕಾರ್ಯಕ್ರಮದಲ್ಲಿ ಚಿಂತಕ ವೂಡೇ ಪಿ. ಕೃಷ್ಣ ಅವರಿಗೆ ಎಸ್. ವಿಶ್ವನಾಥ್ ಪ್ರಶಸ್ತಿ ಪ್ರದಾನ ಮಾಡಲಾಯಿತು

**ಮುಖ್ಯಾಂಶಗಳು**

- ಗಾಂಧಿ ಹೋರಾಟ ಇಂದಿಗೂ ಪ್ರಸ್ತುತ
- ರೈತರ ಪರ ಹೋರಾಟ ನಡೆಯಲಿ
- ದೇಶದ ಅಭಿವೃದ್ಧಿಗೆ ಸೇವೆ ಮಾಡಿ

ವಿದ್ಯಾರ್ಥಿಗಳು, ಯುವಕರಿಗೆ ಮಹಾತ್ಮ ಗಾಂಧಿ ಬಗ್ಗೆ ತಿಳಿಸಿಕೊಡಬೇಕು. ಅವರ ಮೌಲ್ಯಗಳನ್ನು ಎಲ್ಲರೂ ಅಳವಡಿಸಿಕೊಳ್ಳುವ ಅವಶ್ಯಕತೆ ಇದೆ

**ಎಸ್.ರಾಜೇಂದ್ರಪ್ಪ**
ನಿವೃತ್ತ ಸಂಪಾದಕ, ಕರ್ನಾಟಕ ಗೆಜೆಟಿಯರ್

ಪ್ರಜಾವಾಣಿ ಸೋಮವಾರ ಮಾರ್ಚ್ 13, 2017



ಮಂಡ್ಯದ ಗಾಂಧಿ ಭವನದಲ್ಲಿ ಭಾನುವಾರ ನಡೆದ ಕಾರ್ಯಕ್ರಮದಲ್ಲಿ ಗಾಂಧಿ ಚಿಂತಕ ವೂಡೇ ಪಿ. ಕೃಷ್ಣ ಅವರಿಗೆ ಗಾಂಧಿವಾದಿ ಎಸ್.ವಿಶ್ವನಾಥ್ ಪ್ರಶಸ್ತಿ ಪ್ರದಾನ ಮಾಡಲಾಯಿತು. ಮಹಾತ್ಮ ಗಾಂಧಿ ಸ್ಮಾರಕ ಟ್ರಸ್ಟ್ ಕಾರ್ಯದರ್ಶಿ ಜಿ.ಬಿ.ಶಿವರಾಜು, ಕರ್ನಾಟಕ ಗೆಜೆಟಿಯರ್ ನಿವೃತ್ತ ಸಂಪಾದಕ ಎಸ್.ರಾಜೇಂದ್ರಪ್ಪ, ಮಹಾತ್ಮ ಗಾಂಧಿ ಸ್ಮಾರಕ ಟ್ರಸ್ಟ್ ಅಧ್ಯಕ್ಷ ಜಿ. ಮಾದೇಗೌಡ, ಗಾಂಧಿ ಚಿಂತಕ ವೇಮುಗಲ್ ಸೋಮಶೇಖರ್, ಜಗದೀಶ್ ಕೊಪ್ಪ ಇತರರು ಇದ್ದಾರೆ

ಉದಯವಾಣಿ ಪತ್ರಿಕೆ - 13/2/2017 ರಂದು

# ದೇಶದ ಸಮಸ್ತರಿಗೂ ಸಮಾನತೆ ಕಲ್ಪಿಸಲು ಗಾಂಧೀಜಿ ಹೋರಾಟ

## ■ ಗಾಂಧೀಜಿ ಮಾತೃಭಾಷೆಯನ್ನು ಹೆಚ್ಚು ಪ್ರೀತಿಸುತ್ತಿದ್ದರು: ಡಾ.ವೂಡೇ ಪಿ.ಕೃಷ್ಣ

ಮಂಡ್ಯ: ದೇಶದ ಪ್ರತಿಯೊಬ್ಬ ನಾಗರಿಕರಿಗೂ ಸಮಾನ ಹಾಗೂ ನ್ಯಾಯಬದ್ಧ ಹಕ್ಕು ಕೊಡಿಸಲು ಮಹಾತ್ಮ ಗಾಂಧೀಜಿ ಹೋರಾಡಿದರು ಎಂದು ಗಾಂಧಿ ಚಿಂತಕ ಡಾ.ವೂಡೇ ಪಿ.ಕೃಷ್ಣ ತಿಳಿಸಿದರು.

ನಗರದಲ್ಲಿ ದಿವಂಗತ ವಿಶ್ವನಾಥ್ ಸಂಸ್ಮರಣಾ ಸಮಿತಿ ಮತ್ತು ಮಹಾತ್ಮ ಗಾಂಧಿ ಸ್ಮಾರಕ ಟ್ರಸ್ಟ್ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಪ್ರಶಸ್ತಿ ಸ್ವೀಕರಿಸಿ ಅವರು ಮಾತನಾಡಿದರು.

ದೇಶದ ಸಮಸ್ತ ಜನರಿಗೂ ಸಮಾನ ಹಕ್ಕು ಕೊಡಿಸಲು ಗಾಂಧೀಜಿ ಹೋರಾಟ ನಡೆಸಿದರು. ಈ ವಿಷಯದಲ್ಲಿ ಅವರು ಕಾಯ, ವಾಚಾ, ಮನಸಾ ಒಂದಾಗಿದ್ದರು. ಮೇರು ನಾಯಕರಲ್ಲಿ ಗಾಂಧೀಜಿಯವರನ್ನು ಹೊರತುಪಡಿಸಿ ಸಮಾನತೆಯ ಪರಿಕಲ್ಪನೆ ಹೊಂದಿದ್ದ ಮತ್ತೊಬ್ಬ ನಾಯಕನನ್ನು ಇಂದಿಗೂ ಕಾಣಲು ಸಾಧ್ಯವಾಗಿಲ್ಲವೆಂದರು.

ಗಾಂಧೀಜಿ ಅವರದ್ದು ಸರಳ - ಮತ್ತು ಪಾರದರ್ಶಕ ಜೀವನವಾಗಿತ್ತು. ಗಾಂಧೀಜಿಯವರು ಮಾತೃಭಾಷೆಯನ್ನು ಹೆಚ್ಚು ಪ್ರೀತಿಸುತ್ತಿದ್ದರು. ದೇಶದಲ್ಲಿ ಹುಟ್ಟಿದ ಎಲ್ಲಾ ಮಕ್ಕಳು ಮಾತೃಭಾಷೆಯಲ್ಲಿಯೇ ಶಿಕ್ಷಣ ಕಲಿಯಬೇಕು ಎಂಬ ಆಕಾಂಕ್ಷೆ ಹೊಂದಿದ್ದರು. ಅದೇ ರೀತಿ ಕನ್ನಡ ಭಾಷೆಯ ಬಗ್ಗೆ ಪ್ರೀತಿ-ಅಭಿಮಾನ ಬೆಳೆಸಿಕೊಂಡು ಮಾತೃಭಾಷೆಯಲ್ಲೇ ಮಕ್ಕಳಿಗೆ ಶಿಕ್ಷಣ ಕೊಡಿಸುವಂತೆ ಸಲಹೆ ನೀಡಿದರು.



ಮಂಡ್ಯದಲ್ಲಿ ದಿವಂಗತ ಎಸ್.ವಿಶ್ವನಾಥ್ ಸಂಸ್ಮರಣಾ ಸಮಿತಿ ಮತ್ತು ಮಹಾತ್ಮ ಗಾಂಧಿ ಸ್ಮಾರಕ ಟ್ರಸ್ಟ್ ಆಯೋಜಿಸಿದ್ದ ಪ್ರಶಸ್ತಿ ಪ್ರದಾನ ಕಾರ್ಯಕ್ರಮದಲ್ಲಿ ಗಾಂಧಿ ಚಿಂತಕ ವೇಮಗಲ್ ಸೋಮಶೇಖರ್ ಮಾತನಾಡಿದರು.

ಬ್ರಿಟಿಷರು ನಮ್ಮ ದೇಶದಲ್ಲಿ ಆಡಳಿತ ನಡೆಸುವಾಗ ಗಾಂಧೀಜಿ ಯವರು ಅವರ ವಿರುದ್ಧ ಹೋರಾಟ ನಡೆಸಿ, ಅಹಿಂಸಾತ್ಮಕವಾಗಿ ಪರಕೀಯರು ತನ್ನ ಹಾಗೂ ತನ್ನ ದೇಶದ ಜನರ ಮೇಲೆ ಆದೇಶ ಮಾಡುವುದನ್ನು ನಾನು ಎಂದಿಗೂ ಒಪ್ಪುವುದಿಲ್ಲ ಎಂದು ಹೇಳಿದ್ದರು. ತನ್ನ ಜೀವನವೇ ಸಂದೇಶ ಎಂದು ಸಾರಿದ್ದರು ಎಂದು ತಿಳಿಸಿದರು.

ಗಾಂಧಿ ಚಿಂತಕ ವೇಮಗಲ್ ಸೋಮಶೇಖರ್ ಮಾತನಾಡಿ, ಪ್ರಸ್ತುತ ಯುವ ಜನತೆ ಗಾಂಧೀಜಿ ಮಾರ್ಗದರ್ಶನ ಹಾಗೂ ತತ್ವಾದರ್ಶಗಳನ್ನು ಮೈಗೂಡಿಸಿಕೊಂಡು ದೇಶದ ಅಭಿವೃದ್ಧಿಗೆ ಮುನ್ನಡೆಯಬೇಕು. ಸಮಾಜಕ್ಕೆ ಮಾದರಿಯಾಗಿ ಬದುಕಬೇಕಿದೆ. ದೇಶ ನನಗೇನು ಕೊಟ್ಟಿದೆ ಅನ್ನುವುದಕ್ಕಿಂತ ನಾನು ದೇಶಕ್ಕೆ ಏನು ಕೊಟ್ಟಿದ್ದೇನೆ ಎಂಬ ಬಗ್ಗೆ ಚಿಂತಿಸಬೇಕಾಗಿದೆ ಕಿವಿಮಾತು ಹೇಳಿದರು.

ಜಗದೀಶ್ ಕೊಪ್ಪ, ಮಹಾತ್ಮಗಾಂಧಿ ಸ್ಮಾರಕ ಟ್ರಸ್ಟ್‌ನ ಅಧ್ಯಕ್ಷ ಡಾ.ಜಿ.ಮಾದೇಗೌಡ, ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಜಿ.ಬಿ.ಶಿವರಾಜು, ವೈ.ಎ.ದಂತಿ, ಎಸ್. ರಾಜೇಂದ್ರಪ್ಪ, ಜಯಮ್ಮ ಮತ್ತಿತರರಿದ್ದರು.

ಈ ಸಂಜೆ

ಗುರುವಾರ, 9 ಮಾರ್ಚ್, 2017



ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆ ಅಂಗವಾಗಿ ಗಾಂಧೀ ಭವನದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಗಾಂಧೀಜಿಯವರ ಮೊಮ್ಮಗಳು ತಾರಾ ಗಾಂಧೀ ಅವರನ್ನು ಸಚಿವ ಎಚ್.ಕೆ.ಪಾಟೀಲ್ ಸನ್ಮಾನಿಸಿದರು. ಗಾಂಧಿ ಭವನದ ಅಧ್ಯಕ್ಷ ಡಾ.ಹೊ.ಶ್ರೀನಿವಾಸಯ್ಯ, ಗೌರವ ಕಾರ್ಯದರ್ಶಿ ಪ್ರೊ.ಜಿ.ವಿ.ಶಿವರಾಜು, ಮಾಜಿ ಶಾಸಕ ಎಸ್.ಜಿ.ನಂಜಯ್ಯಮಠ , ಡಾ.ಉಷಾ ಅಬ್ರಾಲ್ ಹಾಜರಿದ್ದರು.

ಈ ಸಂಜೆ

ಗುರುವಾರ,09-03-2017



ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣ ಸಂಸ್ಥೆ ಹಾಗೂ ಶೇಷಾದ್ರಿಪುರಂ ಕಾನೂನು ಮಹಾವಿದ್ಯಾಲಯದ ಸಂಯುಕ್ತಾಶ್ರಯದಲ್ಲಿ ಗಾಂಧಿ ಭವನದಲ್ಲಿಂದು ಹಮ್ಮಿಕೊಂಡಿದ್ದ ಸಂಸದೀಯ ನಡಾವಳಿಗಳು ಕುರಿತ ವಿಚಾರ ಸಂಕಿರಣವನ್ನು ಕಾನೂನು ಇಲಾಖೆಯ ಪ್ರಧಾನ ಕಾರ್ಯದರ್ಶಿ ಶ್ರೀನಿವಾಸ್, ಸಂಸ್ಥೆಯ ನಿರ್ದೇಶಕ ಎಸ್.ವಿ. ಗುಂಜಗಾವಿ, ಶೇಷಾದ್ರಿಪುರಂ ಕಾಲೇಜಿನ ಪ್ರಧಾನ ಕಾರ್ಯದರ್ಶಿ ಡಾ. ವೂಡೆ ಪಿ.ಕೃಷ್ಣ ಮತ್ತಿತರರಿದ್ದರು.

ಸಂಜೆವಾಣಿ

ಗುರುವಾರ, ಮಾರ್ಚ್ 9, 2017

# ಕಾನೂನು ನಿರ್ದೇಶನಾಲಯ ಆರಂಭ

(ನಮ್ಮ ಪ್ರತಿನಿಧಿಯಿಂದ)

ಬೆಂಗಳೂರು, ಮಾ. 10– ಕಾನೂನು ನಿರ್ದೇಶನಾಲಯ ಸ್ಥಾಪಿಸುವ ಸಂಬಂಧ ರಾಜ್ಯ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಬಜೆಟ್‌ನಲ್ಲಿ ಅನುಮತಿ ಸಿಗುವ ಸಾಧ್ಯತೆ ಇದೆ ಎಂದು ರಾಜ್ಯ ಕಾನೂನು ಇಲಾಖೆ ಪ್ರಧಾನ ಕಾರ್ಯದರ್ಶಿ ಶ್ರೀನಿವಾಸ್ ಎನ್. ಅವರು ಇಂದಿಲ್ಲಿ ತಿಳಿಸಿದರು.

ಕಾನೂನು ಸಚಿವ ಟಿ.ಬಿ.ಜಯಚಂದ್ರ ಅವರ ಅನುಪಸ್ಥಿತಿಯಿಂದಾಗಿ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆ(ಕೆಐಎಲ್‌ಟಿಎಆರ್) ಮತ್ತು ಶೇಷಾದ್ರಿ ಪುರಂ ಮಹಾವಿದ್ಯಾಲಯದ ಸಂಯುಕ್ತಾಶ್ರಯದಲ್ಲಿ ಏರ್ಪಡಿಸಲಾಗಿದ್ದ ಸಂಸದೀಯ ನಡಾವಳಿಗಳು ಕುರಿತ ರಾಜ್ಯ ಮಟ್ಟದ ವಿಚಾರ ಸಂಕೀರಣವನ್ನು ಅವರು ಉದ್ಘಾಟಿಸಿ ಮಾತನಾಡುತ್ತಿದ್ದರು.

ನಿರ್ದೇಶನಾಲಯ ಸ್ಥಾಪನೆಯಿಂದ ಕಾನೂನು ಶಿಕ್ಷಣ ಮತ್ತು ಶಿಕ್ಷಣದಲ್ಲಿ ಗುಣಮಟ್ಟ ಸಾಧ್ಯವಾಗುತ್ತದೆ ಎಂದು ಅಭಿಪ್ರಾಯಪಟ್ಟರು.

ಬಹುತೇಕ ರಾಜಕಾರಣಿಗಳು ಕಾನೂನು ಓದಿದವರಾಗಿದ್ದಾರೆ. ಕಾನೂನು ವಿದ್ಯಾರ್ಥಿಗಳಾದ ನಿಮ್ಮಲ್ಲಿ ಸಾಕಷ್ಟು ಜನರು ರಾಜಕೀಯಕ್ಕೆ ಬಂದರೆ ಅಚ್ಚರಿಯಿಲ್ಲ ಎಂದು ಹೇಳಿದರು.

ಸಂಸತ್ ಕುರಿತಂತೆ ಮಾಹಿತಿ ನೀಡಿದ ಅವರು, ನಮ್ಮ ಕಾಲದಲ್ಲಿ ಸಂಸತ್ ಕಲಾಪಗಳನ್ನು ಹೇಗೆ ನಡೆಯುತ್ತವೆ ಎಂದು ಕಲ್ಪಿಸಿಕೊಳ್ಳಬೇಕಾಗಿತ್ತು, ಆದರೆ ಈಗ ಟಿವಿಗಳಲ್ಲಿ ನೇರಪ್ರಸಾರವಾಗುತ್ತಿವೆ. ವಿದ್ಯಾರ್ಥಿಗಳು ಪ್ರತಿದಿನ ಸುದ್ದಿ ನೋಡಿ ಸಂಸದೀಯ ಕಲಾಪಗಳನ್ನು ತಿಳಿದುಕೊಳ್ಳಬೇಕು

## ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಕೆ

ಎನ್ನುವ ಸಲಹೆಯನ್ನು ಅವರು ನೀಡಿದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಕೆಐಎಲ್ ಟಿ ಎ ಆರ್ ನಿರ್ದೇಶಕ ಎಸ್.ಬಿ.ಗುಂಜಗಾವಿ ಅವರು ಮಾತನಾಡಿ, ದೇಶವನ್ನು ಬಿಟ್ಟು ಹೋಗುವಾಗ ಬ್ರಿಟೀಷರು, ಭಾರತೀಯರು ಆಳಿಸಿಕೊಳ್ಳುವುದಕ್ಕೆ ಅರ್ಹರು ಆಳುವುದಕ್ಕೆ ಅಲ್ಲ ಎಂದು ಹೇಳಿದ್ದರು.

ಆದರೆ, ಭಾರತವೂ ಪ್ರಜಾಪ್ರಭುತ್ವದಲ್ಲಿ ಜಗತ್ತಿನಲ್ಲಿಯೇ ಮಾದರಿ ದೇಶವಾಗಿದೆ ಎಂದ ಅವರು, ಗಾಂಧೀಜಿ ಕಂಡಂತಹ ರಾಮರಾಜ್ಯ ಮತ್ತು ಗ್ರಾಮರಾಜ್ಯದ ಕನಸನ್ನು ಕಾರ್ಯಗತಗೊಳಿಸಲು ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಕೆಲಸ ಮಾಡುತ್ತಿವೆ. ಗಾಂಧೀಜಿ ಕನಸು ಗ್ರಾಮ ಮಟ್ಟದ ಜನರಿಗೆ ಹಕ್ಕುಗಳು ಸಿಗಬೇಕೆನ್ನುವುದಾಗಿದೆ ಎಂದು ಹೇಳಿದರು.

ಗ್ರಾಮಗಳಲ್ಲಿನ ಜನರಿಗೆ ಮೂಲಭೂತ ಹಕ್ಕುಗಳ ಬಗ್ಗೆ ತಿಳುವಳಿಕೆ ಇಲ್ಲ ಅದನ್ನು ತಿಳಿಸುವ ಕೆಲಸ ಕಾನೂನು ವಿದ್ಯಾರ್ಥಿಗಳು ಮಾಡಬೇಕು. ಈ ನಿಟ್ಟಿನಲ್ಲಿ ಈ ವಿಚಾರ ಸಂಕಿರಣವನ್ನು ಹಮ್ಮಿಕೊಳ್ಳಲಾಗಿದೆ ಎಂದು ತಿಳಿಸಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿದ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ. ಓಡೇ ಪಿ.ಕೃಷ್ಣ ಅವರು ಮಾತನಾಡಿ, ನಮ್ಮ ದೇಶದ ಶಕ್ತಿ ಎಂದರೆ ಪ್ರಜಾಪ್ರಭುತ್ವ ಎಂದ ಅವರು ಸಂಸತ್‌ನಲ್ಲಿ ತಾಳ್ಮೆ, ಬೇರೆಯವರು ಮಂಡಿಸುವ ವಿಷಯ ಕೇಳುವ ಮತ್ತು ಮುಕ್ತ ಚರ್ಚೆ ಇರಬೇಕು ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದರು.

ಗಾಂಧೀಜಿ ಹೇಳಿದಂತೆ ಸಾಮಾಜಿಕ, ನೈತಿಕ ಮತ್ತು ಆರ್ಥಿಕ ಸಮಾನತೆ ಸಾಧಿಸಲು ಸ್ವಾತಂತ್ರ್ಯ ಬಂದು 70 ವರ್ಷಗಳಾದರೂ ಸಾಧ್ಯವಾಗಿಲ್ಲ ಎಂದ ಅವರು, ಕಾನೂನು ಕಟ್ಟುವವರೇ ಕಾನೂನು ಮುರಿಯುತ್ತಿದ್ದಾರೆ ಈ ಕೆಲಸ ಆಗಬಾರದು ಎಂದು ಹೇಳಿದರು.

ಸಮಾರಂಭದಲ್ಲಿ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ನಿರ್ಮಲ. ಡಿ. ಉಪಸ್ಥಿತರಿದ್ದರು.



ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆ ನಗರದ ಗಾಂಧಿ ಭವನದಲ್ಲಿ ಹಮ್ಮಿಕೊಂಡಿದ್ದ 'ಸಂಸದೀಯ ನಡಾವಳಿಗಳು' ಕುರಿತ ವಿಚಾರ ಸಂಕಿರಣದಲ್ಲಿ ಕಾನೂನು ಇಲಾಖೆಯ ಪ್ರಧಾನ ಕಾರ್ಯದರ್ಶಿ ಶ್ರೀನಿವಾಸ್, ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ ಸೇರಿದಂತೆ ಮತ್ತಿತರರಿದ್ದರು.

# ವಿವೇಕಾನಂದರ ತತ್ವ, ಆದರ್ಶ ಪಾಲಿಸಿ: ವೂಡೆ ಪಿ.ಕೃಷ್ಣ

**- ವಿಕ ಸುದ್ದಿಲೋಕ ಕೆಂಗೇರಿ ಉಪನಗರ**

ಯುವ ಜನತೆ ಸ್ವಾಮಿ ವಿವೇಕಾನಂದರ ತತ್ವ, ಆದರ್ಶಗಳನ್ನು ಪಾಲಿಸಬೇಕು ಎಂದು ಎಸ್‌ಇಟಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೆ ಪಿ.ಕೃಷ್ಣ ಕರೆ ನೀಡಿದರು.

ಹಂಸಜ್ಯೋತಿ ಬೆಂಗಳೂರು, .ಪಾದ್ರಿಪುರಂ ಅಕಾಡೆಮಿ ಆಫ್ ಬಿಸಿನೆಸ್ ಸ್ಟಡೀಸ್ ಕೆಂಗೇರಿ ಉಪನಗರ ಹಾಗು ಯೋಗಬಂಧು ಬಳಗ ಪ್ರತಿಷ್ಠಾನ ಸಂಯುಕ್ತಾಶ್ರಯದಲ್ಲಿ ಆಯೋಜಿಸಿದ್ದ ವಿಶ್ವ ಪ್ರೇಮಿ ಸ್ವಾಮಿ ವಿವೇಕಾನಂದರ ಸ್ಮರಣೆ ಹಾಗೂ ಹಂಸ ವಿವೇಕರತ್ನ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಅಧ್ಯಕ್ಷತೆವಹಿಸಿ ಮಾತನಾಡಿದರು.

ಬೆಂಗಳೂರು ವಿಶ್ವವಿದ್ಯಾಲಯದ ಮಾಜಿ ಉಪಕುಲಪತಿ ಪ್ರೊ.ಬಿ.ತಿಮ್ಮೇಗೌಡ ಅವರು ಪ್ರಶಸ್ತಿ ಪ್ರದಾನ ಮಾಡಿ ಮಾತನಾಡಿ, ''ನಮ್ಮ ದೇಶದ ಶಕ್ತಿಯೇ ಯುವ ಜನತೆ. ಅವರಿಗೆ ವ್ಯಕ್ತಿತ್ವವನ್ನು ರೂಡಿಸಿಕೊಳ್ಳುವ ಶಕ್ತಿಯನ್ನು ತುಂಬಬೇಕು'' ಎಂದರು.



ಸ್ಮರಣ ಫಲಕವನ್ನು ಡಾ. ವೂಡೆ ಪಿ.ಕೃಷ್ಣ ಬಿಡುಗಡೆ ಮಾಡಿದರು. ಪ್ರೊ.ಬಿ.ತಿಮ್ಮೇಗೌಡ, ಸ್ವಾಮಿ ಶಾರದಾತ್ಮಾನಂದ, ಮು.ಮುರಳೀಧರ, ಪೊ.ಜಯರಾಂ ಇದ್ದರು.

ಮೈಸೂರು ಶಾರದಾ ವಿಲಾಸ ಕಾಲೇಜಿನ ನಿವೃತ್ತ ಪ್ರಾಧ್ಯಾಪಕ ಎ.ವಿ. ಸೂರ್ಯನಾರಾಯಣ, ಕೆಂಗೇರಿ ರಾಮಕೃಷ್ಣ ವಿವೇಕಾನಂದ ಆಶ್ರಮದ ಸ್ವಾಮಿ ಶಾರದಾತ್ಮಾನಂದ, ವಿಚಾರ ಚಿಂತಕರಾದ ಅಪರ್ಣಾ ಪಟವರ್ಧನ್, ಕಿಮ್ಸ್‌ನ ಸಹಪ್ರಾಧ್ಯಾಪಕರಾದ ಡಾ. ಪಿ.ಎಂ.ಗಿರಿಧರ ಉಪಾಧ್ಯಾಯ ಮತ್ತು ದಿಶಾ ಸಂಸ್ಥೆಯ ಆಯೋಜಕ ಕಾರ್ಯದರ್ಶಿ ಪ್ರಮೋದ ನಟರಾಜ್ ಸ್ವಾಮಿ ವಿವೇಕಾನಂದರ ಬಗ್ಗೆ ಮಾತನಾಡಿದರು.

**ಪ್ರಶಸ್ತಿ ಪ್ರದಾನ** : ವಿವಿಧ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ಹಿಂದು ಸಂಘಟಕ ನಾಗರಾಜ ನಾಯ್ಡು, ಚಿಂತಾಮಣಿ ಡಿವೈಎಸ್‌ಪಿ ಕೆ.ಎಸ್. ರಮೇಶ್, ಸಾಯಿ ಸೂರ್ಯ ಹೋಲ್ಡಿಂಗ್ಸ್‌ನ ವ್ಯವಸ್ಥಾಪಕ ನಿರ್ದೇಶಕ ಅನಿಲ್ ಶ್ರೀನಿವಾಸ್, ಸಾಸ್ಮಾಸ್ ಹೆಚ್ ಟೆಕ್ನಾಲಜೀಸ್‌ನ ವ್ಯವಸ್ಥಾಪಕ ನಿರ್ದೇಶಕ ಎಚ್.ಜಿ. ಚಂದ್ರಶೇಖರ್, ಸಂಸದೀಯ ವ್ಯವಹಾರಗಳ ಸಚಿವಾಲಯದ ಹೆಚ್ಚುವರಿ ಕಾರ್ಯದರ್ಶಿ ಜಿ.ಶ್ರೀಧರ್, ಶ್ರೇಯಸ್ ಎಂಟರ್‌ಪ್ರೈಸಸ್ ಎಂಡಿ, ಜಿ. ಶ್ರೀಕಾಂತ್, ಹಿಂದುಸ್ತಾನಿ ಹಾಗೂ ಚಲನಚಿತ್ರ ಗಾಯಕ ರವೀಂದ್ರ ಸೊರಗಾಂವಿ, ಕನ್ನಡ ಜಾನಪದ ಪರಿಷತ್ ರಾಜ್ಯ ಕಾರ್ಯಾಧ್ಯಕ್ಷ ಡಾ.ಎಸ್.ಬಾಲಾಜಿ, ವಂದೇಮಾತರಂ ಸಂಸ್ಥೆ ಸಂಸ್ಥಾಪಕ ಅಧ್ಯಕ್ಷ ಬಿ.ಎಚ್. ಲೋಕೇಶ್ ಮತ್ತು ನೃತ್ಯಪಟು ಮಾಲಿನಿ ರವಿಶಂಕರ್ ಅವರಿಗೆ 'ಹಂಸ ವಿವೇಕರತ್ನ ಪ್ರಶಸ್ತಿ' ಪ್ರದಾನ ಮಾಡಲಾಯಿತು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ
VIJAYAVANI - BENGALURU
4
ಬುಧವಾರ
1 ಮಾರ್ಚ್ 2017
1 MARCH 2017
ಬೆಂಗಳೂರು

# ವೂಡೇ ಪಿ. ಕೃಷ್ಣಗೆ ಪ್ರಶಸ್ತಿ



ಬೆಂಗಳೂರು: ಮಂಡ್ಯದ ಮಹಾತ್ಮಗಾಂಧಿ ಸ್ಮಾರಕ ಟ್ರಸ್ಟ್ ನೀಡುವ 'ಎಸ್. ವಿಶ್ವನಾಥ್ ಪ್ರಶಸ್ತಿ'ಗೆ ಹಿರಿಯ ಶಿಕ್ಷಣ ತಜ್ಞ ಮತ್ತು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಆಯ್ಕೆಯಾಗಿದ್ದಾರೆ. ಮಾ. 2ರಂದು ಮಂಡ್ಯದಲ್ಲಿ ನಡೆಯುವ ಕಾರ್ಯಕ್ರಮದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಗುತ್ತದೆ. ಗಾಂಧೀಜಿ ಚಿಂತನೆಗಳ ಪ್ರಚಾರ ಕಾರ್ಯದಲ್ಲಿ ಸಾಧನೆ ತೋರಿರುವುದನ್ನು ಪರಿಗಣಿಸಿ ಕೃಷ್ಣ ಅವರನ್ನು ಪ್ರಶಸ್ತಿಗೆ ಆಯ್ಕೆ ಮಾಡಲಾಗಿದೆ.

**» ಮಂಡ್ಯದಲ್ಲಿ ನಾಳೆ ಪ್ರದಾನ**

ಕರ್ನಾಟಕ VK
ಮಂಗಳವಾರ,28 ಫೆಬ್ರವರಿ 2017



ನಮ್ಮ ಬೆಂಗಳೂರು

ಸಿಟಿಲೈಟ್ಸ್

# ವೂಡೆ ಕೃಷ್ಣಗೆ ಪ್ರಶಸ್ತಿ

**ಬೆಂಗಳೂರು:** ಶಿಕ್ಷಣ ತಜ್ಞ ಮತ್ತು ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೆ ಪಿ ಕೃಷ್ಣ ಅವರು ಮಂಡ್ಯದ ಮಹಾತ್ಮ ಗಾಂಧಿ ಸ್ಮಾರಕ ಟ್ರಸ್ಟ್ ನೀಡುವ 'ಎಸ್ ವಿಶ್ವನಾಥ್ ಪ್ರಶಸ್ತಿ'ಗೆ ಪಾತ್ರರಾಗಿದ್ದಾರೆ. ಮಾರ್ಚ್ 2ರಂದು ಮಂಡ್ಯದಲ್ಲಿ ನಡೆಯುವ ಸಮಾರಂಭದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಗುವುದು. ಕೃಷ್ಣ ಅವರು ಗಾಂಧಿಯವರು ಚಿಂತನೆಗಳನ್ನು ಪ್ರಚುರಪಡಿಸಲು ನಡೆಸುತ್ತಿರುವ ಪ್ರಯತ್ನಗಳನ್ನು ಪರಿಗಣಿಸಿ ಅವರನ್ನು ಈ ಪುರಸ್ಕಾರಕ್ಕೆ ಆಯ್ಕೆ ಮಾಡಲಾಗಿದೆ ಎಂದು ಟ್ರಸ್ಟ್‌ನ ಉಪಾಧ್ಯಕ್ಷ ಲಿಂಗಣ್ಣ ಬಂಧುಕಾರ್ ತಿಳಿಸಿದ್ದಾರೆ.

ಕನ್ನಡ ದಿನಪತ್ರಿಕೆ ಸೋಮವಾರ 27 ಫೆಬ್ರುವರಿ 2017

27 FEBRUARY 2017

# ನಮ್ಮೂರಲ್ಲಿಂದು



ಪ್ರಚಾರ ಅಭಿಯಾನ: ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ರಾಷ್ಟ್ರೀಯ ಸೇವಾ ಯೋಜನೆ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು ವಿಶ್ವವಿದ್ಯಾಲಯ ಆಯೋಜನೆ. ಉದ್ಘಾಟನೆ: ಸಚಿವ ಪ್ರಮೋದ್ ಮಧ್ವರಾಜ್. ಅಧ್ಯಕ್ಷತೆ: ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ಹೊ. ಶ್ರೀನಿವಾಸಯ್ಯ. ಮುಖ್ಯ ಅತಿಥಿಗಳು: ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಅಪರ ಮುಖ್ಯ ಕಾರ್ಯದರ್ಶಿ ಡಾ.ರಜನೀಶ್ ಗೋಯೆಲ್, ರಾಷ್ಟ್ರೀಯ ಸೇವಾ ಯೋಜನೆ ಪ್ರಾದೇಶಿಕ ಕೇಂದ್ರದ ನಿರ್ದೇಶಕ ಎ.ಎನ್. ಪೂಜಾರ್. ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ ಅವರಿಂದ 'ರಾಷ್ಟ್ರೀಯ ಸೇವಾ ಯೋಜನೆ ಮತ್ತು ಗಾಂಧಿ ತತ್ವ' ಕುರಿತಾಗಿ ವಿಶೇಷ ಉಪನ್ಯಾಸ. **ಸ್ಥಳ: ಗಾಂಧಿ ಭವನ ಸಭಾಂಗಣ, 2ನೇ ಮಹಡಿ, ಕುಮಾರಕೃಪ ರಸ್ತೆ. ಬೆಳಗ್ಗೆ 11ಕ್ಕೆ.**

**ಚರ್ಚಾ ಸ್ಪರ್ಧೆ:** ಗಾಂಧಿ ಸಾಹಿತ್ಯ ಸಂಘ ಆಯೋಜನೆ. ಅಂತರ ಕಾಲೇಜು ಕನ್ನಡ ಚರ್ಚಾ ಸ್ಪರ್ಧೆ. ವಿಷಯ: ರಾಷ್ಟ್ರಪಿತ ಗಾಂಧೀಜಿ ಕಂಡ ರಾಮರಾಜ್ಯದ ಕನಸು ಯುವ ಪೀಳಿಗೆಯಿಂದ ನನಸಾಗಲು ಮಾತ್ರ ಸಾಧ್ಯ. ಉದ್ಘಾಟನೆ: ಕಸಾಪ ಬೆಂಗಳೂರು ನಗರ ಜಿಲ್ಲಾಧ್ಯಕ್ಷ ಮಾಯಣ್ಣ. ಅಧ್ಯಕ್ಷತೆ: ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ. ಮುಖ್ಯ ಅತಿಥಿ: ಬಿಇಎಸ್ ವಿದ್ಯಾಸಂಸ್ಥೆ ಪ್ರಾಂಶುಪಾಲ ಎಂ. ರಂಗರಾಜು. ತೀರ್ಪುಗಾರರು: ಕನ್ನಡ ಪ್ರಾಧ್ಯಾಪಕರಾದ ಡಾ.ಪುಟ್ಟಸ್ವಾಮಿ, ಕೆ.ಪಿ. ತುಳಸೀ ಪ್ರಸನ್ನ, ಸಂಸ್ಕೃತ ಪ್ರಾಧ್ಯಾಪಕ ಡಾ.ಮೃತ್ಯುಂಜಯ. **ಸ್ಥಳ: ಗಾಂಧಿ ಸಾಹಿತ್ಯ ಸಂಘದ ಆವರಣ, 8ನೇ ಅಡ್ಡರಸ್ತೆ, ಮಲ್ಲೇಶ್ವರ. ಮಧ್ಯಾಹ್ನ 2ರಿಂದ.**



ಕನ್ನಡಪ್ರಭ

ಸೋಮವಾರ 20.2.2017

# ಡಾ ಕೃಷ್ಣಗೆ ವಿಶ್ವನಾಥ್ ಸ್ಮಾರಕ ಪ್ರಶಸ್ತಿ

ಬೆಂಗಳೂರು: ಮಹಾತ್ಮ ಗಾಂಧಿ ಸ್ಮಾರಕ ದತ್ತಿ ವತಿಯಿಂದ ನೀಡಲಾಗುವ 'ಗಾಂಧಿವಾದಿ ಎಸ್. ವಿಶ್ವನಾಥ್ ಸ್ಮಾರಕ ಪ್ರಶಸ್ತಿ'ಗೆ ಗಾಂಧಿ ಪ್ರತಿಷ್ಠಾನ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಅವರು ಭಾಜನರಾಗಿದ್ದಾರೆ. ಪ್ರತಿಷ್ಠಾನದ ಅಧ್ಯಕ್ಷ ಡಾ. ಜಿ. ಮಾದೇಗೌಡರ ಅಧ್ಯಕ್ಷತೆಯಲ್ಲಿ ಇತ್ತೀಚೆಗೆ ನಡೆದ ಸಭೆಯಲ್ಲಿ ಆಯ್ಕೆ ಮಾಡಲಾಗಿದೆ. ಕುಮಾರಕೃಪಾ ರಸ್ತೆಯಲ್ಲಿರುವ ಗಾಂಧಿ ಭವನದಲ್ಲಿ ಮಾ.12ರಂದು ಬೆಳಗ್ಗೆ 11 ಗಂಟೆಗೆ ನಡೆಯಲಿರುವ ಕಾರ್ಯಕ್ರಮದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಗುತ್ತದೆ. ಗಾಂಧಿ ಚಿಂತಕರಿಗೆ ಮತ್ತು ಗಾಂಧೀಜಿ ಅವರ ಕನಸಿನ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿಸಿಕೊಂಡಿರುವ ವ್ಯಕ್ತಿಗಳನ್ನು ಗುರುತಿಸಿ, ಪ್ರಸಿದ್ಧ ಸಾಹಿತಿ ಹಾಗೂ ಎಂಜಿನಿಯರ್ ಆಗಿ ಸೇವೆ ಸಲ್ಲಿಸಿದ್ದ ಗಾಂಧಿವಾದಿ ಎಸ್. ವಿಶ್ವನಾಥ್ ಹೆಸರಿನಲ್ಲಿ ಪ್ರಶಸ್ತಿ ನೀಡಲಾಗುತ್ತಿದೆ.



ಸಂಜೆವಾಣಿ
ಸೋಮವಾರ, ಫೆಬ್ರವರಿ 20, 2017

# ಡಾ.ವೂಡೇ ಪಿ.ಕೃಷ್ಣರಿಗೆ ಎಸ್.ವಿಶ್ವನಾಥ್ ಪ್ರಶಸ್ತಿ

ಬೆಂಗಳೂರು,ಫೆ 20– ಮಹಾತ್ಮ ಗಾಂಧಿ ಸ್ಮಾರಕ ವತಿಯಿಂದ ನೀಡಲಾಗುವ 2017ರ ಗಾಂಧಿವಾದಿ ಎಸ್.ವಿಶ್ವನಾಥ್ ಸ್ಮಾರಕ ಪ್ರಶಸ್ತಿಗೆ ಶಿಕ್ಷಣ ತಜ್ಞ ಹಾಗೂ ಗಾಂಧೀ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಅವರು ಭಾಜನರಾಗಿದ್ದಾರೆ.

ಪ್ರಸಿದ್ಧ ಸಾಹಿತಿ, ರಾಜ್ಯದ ಇಂಜಿನಿಯರ್ ಇನ್ ಛೀಫ್ ಆಗಿ ಸೇವೆ ಸಲ್ಲಿಸಿದ್ದ ಗಾಂಧಿವಾದಿ ಎಸ್.ವಿಶ್ವನಾಥ್ ಅವರ ಹೆಸರಿನಲ್ಲಿ ಪ್ರಶಸ್ತಿಯನ್ನು ನೀಡಲಾಗುತ್ತಿದ್ದು. ಈ ಪ್ರಶಸ್ತಿಯನ್ನು ಗಾಂಧಿ ಚಿಂತಕರಿಗೆ ಹಾಗೂ ಗಾಂಧೀಜಿಯವರ ಕನಸಿನ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿಸಿಕೊಂಡವರಿಗೆ ನೀಡಲಾಗುವುದು. ಡಾ.ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ ನಡೆದ ಆಯ್ಕೆ ಸಮಿತಿ ಸಭೆಯು ಡಾ.ವೂಡೇ ಪಿ.ಕೃಷ್ಣ ಅವರನ್ನು ಸರ್ವಾನುಮತದಿಂದ ಆಯ್ಕೆ ಮಾಡಿದೆ.

2 ಹೊಸ ದಿಗಂತ
ಬೆಂಗಳೂರು
ಶನಿವಾರ, 18 ಫೆಬ್ರವರಿ 2017

ಸುದ್ದಿ ಮಿಡಿತ

# ವೂಡೇ ಪಿ.ಕೃಷ್ಣ ಅವರಿಗೆ ಗಾಂಧಿ ದತ್ತಿ ಪ್ರಶಸ್ತಿ

ಬೆಂಗಳೂರು: ಮಹಾತ್ಮ ಗಾಂಧಿ ದತ್ತಿಯಿಂದ ನೀಡಲಾಗುವ 2017ರ ಗಾಂಧಿವಾದಿ ಎಸ್. ವಿಶ್ವನಾಥ್ ಸ್ಮಾರಕ ಪ್ರಶಸ್ತಿಗೆ ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ ಭಾಜನರಾಗಿದ್ದಾರೆ.



ಡಾ.ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ ನಡೆದ ಆಯ್ಕೆ ಸಮಿತಿ ಸಭೆಯು ಡಾ.ವೂಡೇ ಪಿ.ಕೃಷ್ಣ ಅವರನ್ನು ಹೆಸರನ್ನು ಪ್ರಶಸ್ತಿಗೆ ಆಯ್ಕೆ ಮಾಡಿದೆ.

ಪ್ರಸಿದ್ಧ ಸಾಹಿತಿ, ರಾಜ್ಯದ ಇಂಜಿನಿಯರ್ ಇನ್ ಚೀಫ್ ಆಗಿ ಸೇವೆ ಸಲ್ಲಿಸಿದ್ದ ಗಾಂಧಿವಾದಿ ಎಸ್. ವಿಶ್ವನಾಥ್ ಅವರ ಹೆಸರಿನಲ್ಲಿ ಈ ಪ್ರಶಸ್ತಿಯನ್ನು ನೀಡಲಾಗುತ್ತಿದೆ. ಈ ಪ್ರಶಸ್ತಿಯನ್ನು ಗಾಂಧಿ ಚಿಂತಕರಿಗೆ ಹಾಗೂ ಗಾಂಧೀಜಿಯವರ ಕನಸಿನ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿಸಿಕೊಂಡವರಿಗೆ ನೀಡಲಾಗುವುದು.

ಸಂಯುಕ್ತ ಕರ್ನಾಟಕ

17 ಫೆಬ್ರವರಿ, 2017

ಶುಕ್ರವಾರ

# ವೂಡೇ ಪಿ. ಕೃಷ್ಣ ಅವರಿಗೆ ಪ್ರಶಸ್ತಿ



ಬೆಂಗಳೂರು: ಮಹಾತ್ಮಗಾಂಧಿ ಸ್ಮಾರಕ ದತ್ತಿ ವತಿಯಿಂದ ನೀಡಲಾಗುವ 2017ರ ಗಾಂಧಿವಾದಿ ಎಸ್. ವಿಶ್ವನಾಥ್ ಸ್ಮಾರಕ ಪ್ರಶಸ್ತಿಗೆ ಶಿಕ್ಷಣ ತಜ್ಞ ಹಾಗೂ ಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಭಾಜನರಾಗಿದ್ದಾರೆ.

ಹೆಸರಾಂತ ಸಾಹಿತಿ, ರಾಜ್ಯದ ಮುಖ್ಯ ಅಭಿಯಂತರರಾಗಿ ಸೇವೆ ಸಲ್ಲಿಸಿದ್ದ ಗಾಂಧಿವಾದಿ ಎಸ್. ವಿಶ್ವನಾಥ್ ಅವರ ಹೆಸರಿನಲ್ಲಿ ಈ ಪ್ರಶಸ್ತಿಯನ್ನು ನೀಡಲಾಗುತ್ತಿದ್ದು, ಗಾಂಧಿ ಚಿಂತನೆಗಳನ್ನು ಹಾಗೂ ಗಾಂಧೀಜಿಯವರ ಕನಸಿನ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿಸಿಕೊಂಡವರನ್ನು ಪ್ರಶಸ್ತಿಗೆ ಪರಿಗಣಿಸಲಾಗುತ್ತಿದೆ.

5 ಈ ಸಂಜೆ
ಬುಧವಾರ, 08-02-2017

# ಯುವ ಜನತೆಗೆ ಇಚ್ಛಾಶಕ್ತಿ- ಕಲ್ಪನಾಶಕ್ತಿ ಅಗತ್ಯ



**ಬೆಂಗಳೂರು, ಫೆ.8-** ಯುವಜನತೆಗೆ ಇಚ್ಛಾ ಶಕ್ತಿ, ಕಲ್ಪನಾ ಶಕ್ತಿ, ಸಂಕಲ್ಪ ಶಕ್ತಿ ಇರಬೇಕು. ಸಮಾಜದಿಂದ ಉದ್ಯೋಗ ಬೇಡುವವರಾಗದೆ ಉದ್ಯೋಗವನ್ನು ಸೃಷ್ಟಿಸುವವರಾಗಬೇಕು. ಇದರಿಂದ ಸ್ವಾವಲಂಬಿ ಮನೋಭಾವ ಬೆಳೆದುಬಡತನ ನಿರ್ಮೂಲವಾಗುತ್ತದೆ ಎಂದು ನೊಬೆಲ್ ಶಾಂತಿ ಪ್ರಶಸ್ತಿ ಪುರಸ್ಕೃತರಾದ ಪ್ರೊ. ಮಹಮದ್ ಯೂನೀಸ್ ನುಡಿದರು.

ಬಡತನ ಯಾವಾಗಲೂ ಬಡವರಿಂದ ಸೃಷ್ಟಿಯಾಗಿರುವುದಿಲ್ಲ, ಅಥವಾ ಯಾವುದೇ ಸಮಸ್ಯೆ ತಕ್ಷಣಕ್ಕೆ ಸೃಷ್ಟಿಯಾಗದೇ ದೀರ್ಘಕಾಲದ ಪ್ರಕ್ರಿಯೆಯಾಗಿರುತ್ತದೆ. ಆದರಲ್ಲೂ ಗ್ರಾಮೀಣ ಮಹಿಳೆಯರು ಆರ್ಥಿಕವಾಗಿ ಸದೃಢಗೊಂಡರೆ ಇಡೀ ದೇಶ ಸ್ವಾವಲಂಬನೆಯಾಗಿ ಬಡತನ ನಿರ್ಮೂಲನೆಗೊಳ್ಳುವುದರಲ್ಲಿ ಸಂದೇಹವಿಲ್ಲ ಎಂದರು.

ನಾನು ಬಾಂಗ್ಲದೇಶದ ಹಳ್ಳಿಯಿಂದ ಬಂದವನು. ಪಾಲಕರು ನಗರದ ಕಡೆ ವಲಸೆ ಬಂದ ಕಾರಣ ನಾನು ಅನಿವಾರ್ಯವಾಗಿ ನಗರದ ಕಡೆ ಮುಖ ಮಾಡಿದೆ. ಅಲ್ಲೇ ವ್ಯಾಸಂಗ ಮಾಡಿ ಬಾಂಗ್ಲದೇಶದಲ್ಲಿರುವ ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರ್ ಆಗಿ ಕಾರ್ಯ ಪ್ರಾರಂಭಿಸಿದೆ ಎಂದು ಹಿಂದಿನ ದಿನಗಳನ್ನು ಮೆಲುಕು ಹಾಕಿ ವಿದ್ಯಾರ್ಥಿಗಳು ಸ್ವಾವಲಂಬಿಗಳಾಗುವುದರತ್ತ ಗಮನ ಹರಿಸಬೇಕೆಂದು ಕಿವಿಮಾತು ಹೇಳಿದರು.

ಶೇಷಾದ್ರಿಪುರ ಶಿಕ್ಷಣ ದತ್ತಿ (ಎಸ್‌ಇಟಿ) ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಮಾತನಾಡಿ, ಯುವಕರು ತಮ್ಮ ಅಮೂಲ್ಯವಾದ ಕ್ಷಣಗಳನ್ನು ವ್ಯರ್ಥ ಮಾಡಬಾರದು. ಪಠ್ಯದ ಜತೆಗೆ ಸೃಜನಶೀಲವಾಗಿ ಆಲೋಚನೆಗಳನ್ನು ಮಾಡಬೇಕು. ಮಹಿಳೆಯರಿಗೆ ಗೌರವ ನೀಡುವುದನ್ನು ಕಲಿತುಕೊಳ್ಳಬೇಕು ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಅಧ್ಯಕ್ಷ ಪಂಡಿತಾರಾಧ್ಯ ಅವರು ಪ್ರೊ.ಮಹಮದ್ ಯೂನೀಸ್ ಅವರ ಕಿವಿಮಾತನ್ನು ವಿದ್ಯಾರ್ಥಿಗಳು ಗಂಭೀರವಾಗಿ ಪರಿಗಣಿಸಬೇಕೆಂದರು.

ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ.ಕೃಷ್ಣ ರವರು ಕಾರ್ಯಕ್ರಮಕ್ಕೆ ಎಲ್ಲರನ್ನು ಸ್ವಾಗತಿಸಿದರು. ಕಾಲೇಜಿನ ಪ್ರಾಂಶುಪಾಲರಾದ ಡಾ.ಎಸ್.ಎನ್.ವೆಂಕಟೇಶ್ ರವರು ರಜತ ಮಹೋತ್ಸವದ ಸಂಭ್ರಮಕ್ಕೆ ಕಾರಣವಾದ ಕಾಲೇಜು ನಡೆದು ಬಂದ ಹಾದಿಯನ್ನು ಪರಿಚಯಿಸಿದರು.

ಸಂಸ್ಥೆಯ ವಿವಿಧ ಕಾಲೇಜುಗಳ ಪ್ರಾಂಶುಪಾಲರುಗಳು, ಅಧ್ಯಾಪಕರು, ವಿದ್ಯಾರ್ಥಿಗಳು ಉಪಸ್ಥಿತರಿದ್ದು ಕಾರ್ಯಕ್ರಮದ ಸದುಪಯೋಗ ಪಡೆದುಕೊಂಡರು.

ಸಂಸ್ಥೆಯ ಅಧ್ಯಯನ ನಿರ್ದೇಶಕರಾದ ಡಾ.ಎಂ.ಪ್ರಕಾಶ್ , ಬಯೋಟೆಕ್ನಾಲಜಿ ವಿಭಾಗದ ಮುಖ್ಯಸ್ಥರಾದ ಪ್ರೊ. ಸಂತನುದಾಸ್ ಹಾಗೂ ಅಧ್ಯಾಪಕ ಪ್ರೊ.ಸಲ್ಮಾಭಾನು ಪಾಲ್ಗೊಂಡಿದ್ದರು.

ವಿಜಯವಾಣಿ ಬುಧವಾರ 8 ಫೆಬ್ರವರಿ 2017
VIJAYAVANI » 8 FEBRUARY 2017

# ದೇಶ ನಿರ್ಮಾಣಕ್ಕೆ ನೀವೇ ಮುಂದಾಗಿ

## ನೊಬೆಲ್ ಪುರಸ್ಕೃತ ಪ್ರೊ. ಮಹಮದ್ ಯೂನಿಸ್ ಸಲಹೆ



ಪ್ರೊ. ಮಹಮದ್ ಯೂನಿಸ್ ಅವರ ಸನ್ಮಾನ ಕಾರ್ಯಕ್ರಮದಲ್ಲಿ ಎನ್.ಆರ್. ಪಂಡಿತಾರಾಧ್ಯ, ಡಾ. ವೂಡೆ.ಪಿ. ಕೃಷ್ಣ, ಡಾ. ಎಂ. ಪ್ರಕಾಶ್, ಡಾ. ವೆಂಕಟೇಶ್ ಮತ್ತಿತರರು ಉಪಸ್ಥಿತರಿದ್ದರು.

**ವಿಜಯವಾಣಿ ಸುದ್ದಿಜಾಲ** ಬೆಂಗಳೂರು

ದೇಶದಲ್ಲಿರುವ ಲೋಪ-ದೋಷಗಳಿಗಾಗಿ ಮತ್ತೊಬ್ಬರನ್ನು ದೂಷಿಸುವ ಬದಲು ಉತ್ತಮ ದೇಶ ನಿರ್ಮಾಣದ ಬಗ್ಗೆ ಕನಸು ಕಾಣಬೇಕು. ಅದನ್ನು ನನಸು ಮಾಡಲು ಶ್ರಮಿಸಬೇಕು ಎಂದು ನೊಬೆಲ್ ಶಾಂತಿ ಪ್ರಶಸ್ತಿ ಪುರಸ್ಕೃತ ಬಾಂಗ್ಲಾದೇಶದ ಗ್ರಾಮೀಣ ಬ್ಯಾಂಕ್ ಸ್ಥಾಪಕ ಪ್ರೊ. ಮಹಮದ್ ಯೂನಿಸ್ ವಿದ್ಯಾರ್ಥಿಗಳಿಗೆ ಕರೆ ನೀಡಿದ್ದಾರೆ.

» **ಯಲಹಂಕದ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜು ಬೆಳ್ಳಿಹಬ್ಬ**

ಯಲಹಂಕದಲ್ಲಿರುವ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನ 'ಬೆಳ್ಳಿಹಬ್ಬ'ಕ್ಕೆ ಚಾಲನೆ ನೀಡಿ ಮಾತನಾಡಿದರು. ನಿಮ್ಮಲ್ಲಿ ಸಾಕಷ್ಟು ಶಕ್ತಿ ಇದೆ. ಅದನ್ನು ಸದ್ಬಳಕೆ ಮಾಡಿಕೊಳ್ಳಬೇಕಿದೆ. ನೀವು ಉದ್ಯೋಗ ಅರಸಿಕೊಂಡು ಹೋಗುವ ಬದಲು ಸ್ವತಃ ನೀವೇ ಮತ್ತೊಬ್ಬರಿಗೆ ಉದ್ಯೋಗ ನೀಡುವಂತಾಗಬೇಕು ಎಂದರು.

ನಾನು ಬಾಂಗ್ಲಾದೇಶದ ಹಳ್ಳಿಯಿಂದ ಬಂದವನು. 1974ರಲ್ಲಿ ಬಾಂಗ್ಲಾದೇಶದ ಪರಿಸ್ಥಿತಿ ಬೇರೆಯೇ ಇತ್ತು. ಜನರು ಹಸಿವಿನಿಂದ ಸಾಯುತ್ತಿದ್ದರು. ಹೇಗಾದರೂ ಮಾಡಿ ಹಸಿವು ನೀಗಿಸಬೇಕು. ಆರ್ಥಿಕ ಸುಧಾರಣೆ ತರಬೇಕು ಎಂದು ನಿರ್ಧರಿಸಿ 1976ರಲ್ಲಿ 'ಗ್ರಾಮೀಣ' ಬ್ಯಾಂಕ್ ಸ್ಥಾಪಿಸಿದೆ. ಬ್ಯಾಂಕ್ ಉದ್ಯೋಗಿಗಳ ಪೈಕಿ ಶೇ.97 ಮಹಿಳೆಯರಿದ್ದರು. ಈ ರೀತಿಯಾಗಿ ಮಹಿಳಾ ಸಬಲೀಕರಣಕ್ಕೂ ಒತ್ತು ನೀಡಿದೆವು. ಯುವಕರಿಗೆ ಸಹಾಯ ಮಾಡಲು ಸೋಷಿಯಲ್ ಬಿಜಿನೆಸ್ ಫಂಡ್ ಆರಂಭಿಸಿದೆವು. ಇದರಿಂದಾಗಿ ತಮ್ಮ ಆಲೋಚನೆಗಳನ್ನು ಕಾರ್ಯಗತಗೊಳಿಸಲು ಯುವಕರಿಗೆ ಬಂಡವಾಳ ಒದಗಿಸಿ ಸ್ವಉದ್ಯೋಗಿಗಳನ್ನಾಗಿದೆವು ಎಂದು ವಿವರಿಸಿದರು.

ಶೇಷಾದ್ರಿಪುರ ಶಿಕ್ಷಣ ದತ್ತಿ (ಎಸ್ಇಟಿ) ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಗೌರವ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ನಿರ್ದೇಶಕ ಡಾ. ಎಂ. ಪ್ರಕಾಶ್, ಪ್ರಾಂಶುಪಾಲ ಡಾ. ವೆಂಕಟೇಶ್ ಇತರರಿದ್ದರು.

# ಹೊಸ ದಿಗಂತ

ಬೆಂಗಳೂರು
ಮಂಗಳವಾರ, 7 ಫೆಬ್ರವರಿ 2017


## ಸನ್ಮಾನ...




ಯಲಹಂಕದಲ್ಲಿನ ಶೇಷಾದ್ರಿಪುರ ಪ್ರಥಮ ದರ್ಜೆ ಕಾಲೇಜಿನ ರಜತ ಮಹೋತ್ಸವದಲ್ಲಿ ಶೇಷಾದ್ರಿಪುರ ಶಿಕ್ಷಣ ಸಂಸ್ಥೆ ವತಿಯಿಂದ ನೊಬೆಲ್ ಪುರಸ್ಕೃತ ಪ್ರೊ.ಮಹಮ್ಮದ್ ಯೂನಸ್ ಅವರನ್ನು ಸನ್ಮಾನಿಸಲಾಯಿತು. ಸಂಸ್ಥೆ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ಡಾ.ವುಡೆ ಪಿ ಕೃಷ್ಣ ಮತ್ತಿತತರು ಇದ್ದರು.

ಈ ಸಂಜೆ

ಮಂಗಳವಾರ 07, ಫೆಬ್ರವರಿ 2017




ಯಲಹಂಕದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ ರಜತ ಮಹೋತ್ಸವ ಕಾರ್ಯಕ್ರಮದಲ್ಲಿ ಸ್ಮರಣಾರ್ಥ ನೊಬೆಲ್ ಶಾಂತಿ ಪ್ರಶಸ್ತಿ ಪುರಸ್ಕೃತ ಪ್ರೊ. ಮೊಹಮದ್ ಯೂನೀಸ್ ಗಿಡ ನೆಟ್ಟರು. ಶಿಕ್ಷಣ ದತ್ತಿಯ ಅಧ್ಯಕ್ಷ ಪಂಡಿತಾರಾಧ್ಯಕ್ಷ, ಡಾ. ವೂಡೇ. ಪಿ. ಕೃಷ್ಣ, ಪ್ರೊ. ಸಂತಸುರಾನ್, ಪ್ರೊ. ಸಲ್ಮಾಭಾನು ಮತ್ತಿತರರಿದ್ದರು.

vishwavani.news
07.02.2017
ಮಂಗಳವಾರ

### ಗ್ರಾಮೀಣ ಬ್ಯಾಂಕ್ ಸಂಸ್ಥಾಪಕ, ನೊಬೆಲ್ ಪುರಸ್ಕೃತ ಪ್ರೊ. ಮಹಮದ್ ಯೂನಿಸ್ ಅಭಿಪ್ರಾಯ

# ಉದ್ಯೋಗ ಹುಡುಕುವ ಬದಲು ಉದ್ಯೋಗಸ್ಥರಾಗಿ

**ವಿಶ್ವವಾಣಿ ಸುದ್ದಿಮನೆ** ಬೆಂಗಳೂರು

ನಾನು ಬಾಂಗ್ಲಾದೇಶದ ಹಳ್ಳಿಯಿಂದ ಬಂದವನು. ಪಾಲಕರು ನಗರದ ಕಡೆ ವಲಸೆ ಬಂದ ಕಾರಣ ನಾನು ಅನಿವಾರ್ಯವಾಗಿ ನಗರದ ಕಡೆ ಮುಖ ಮಾಡಿದೆ. ಅಲ್ಲೇ ವ್ಯಾಸಂಗ ಮಾಡಿ, ಪ್ರೊಫೆಸರ್ ಹುದ್ದೆ ಪಡೆದೆ ಎಂದು ನೊಬೆಲ್ ಪುರಸ್ಕೃತ ಪ್ರೊ. ಮಹಮದ್ ಯೂನಿಸ್ ತಮ್ಮ ಅನುಭವ ಹಂಚಿಕೊಂಡರು.

ಸೋಮವಾರ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು ಯಲಹಂಕ ಉಪನಗರದಲ್ಲಿ ಏರ್ಪಡಿಸಿದ್ದ ಕಾಲೇಜಿನ ರಜತ ಮಹೋತ್ಸವದಲ್ಲಿ ಭಾಗವಹಿಸಿ ಮಾತನಾಡಿ, 1974ರಲ್ಲಿ ಬಾಂಗ್ಲಾದೇಶದ ಪರಿಸ್ಥಿತಿಯೇ ಬೇರೆ ರೀತಿ ಇತ್ತು. ಅಲ್ಲಿನ ಜನರು ಹಸಿವು ಹಾಗೂ ವೃದ್ಧಾಪ್ಯದಿಂದ ಮೃತಪಡುತ್ತಿದ್ದರು. ಇದನ್ನು ಕಂಡು ನನಗೆ ಬೇಸರವಾಯಿತು. ಹೇಗಾದರೂ ಮಾಡಿ ಹಸಿವು ನೀಗಿಸಬೇಕೆಂದು ಪಣ ತೊಟ್ಟೆ. ಅಲ್ಲಿನ ಆರ್ಥಿಕ ಸುಧಾರಣೆ ಮಾಡುವ ಉದ್ದೇಶದಿಂದ ಗ್ರಾಮೀಣ ಬ್ಯಾಂಕ್ ಸ್ಥಾಪಿಸಿದೆ ಎಂದು ವಿವರಿಸಿದರು.



ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಜತ ಮಹೋತ್ಸವದಲ್ಲಿ ನೊಬೆಲ್ ಪುರಸ್ಕೃತ ಪ್ರೊ.ಮಹಮದ್ ಯೂನಿಸ್ ಅವರನ್ನು ಸನ್ಮಾನಿಸಲಾಯಿತು. ಶೇಷಾದ್ರಿಪುರಂ ಶಿಕ್ಷಣ ದತ್ತಿ (ಎಸ್‌ಇಟಿ)ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಇದ್ದರು.

ಅರ್ಥಶಾಸ್ತ್ರದಿಂದ ಅರ್ಥವ್ಯವಸ್ಥೆ ಬದಲಾಯಿಸುವುದು ಕಷ್ಟ ಎಂಬ ಸತ್ಯ ತಿಳಿಯಿತು. 1976ರಲ್ಲಿ ಗ್ರಾಮೀಣ ಬ್ಯಾಂಕ್ ಪ್ರಾರಂಭಿಸಿದೆ. ಇದು ಇತರೆ ರಾಷ್ಟ್ರೀಕೃತ ಬ್ಯಾಂಕುಗಳಿಗೆ ವಿರುದ್ಧವಾಗಿದ್ದು, ಬಡವರಿಗೆ ಅಲ್ಲಿ ಸಾಲ ನೀಡುತ್ತಿರಲಿಲ್ಲ. ಆದರೆ, ನಮ್ಮ ಬ್ಯಾಂಕುಗಳಲ್ಲಿ ಬಡವರಿಗೆ ಸಾಲ ನೀಡಲು ಮುಂದಾದೆವು. ಬ್ಯಾಂಕ್ ಉದ್ಯೋಗಿಗಳ ಪೈಕಿ ಶೇ.97 ಮಹಿಳೆಯರೇ ಇದ್ದರು. ನಾವು ಹೆಚ್ಚು ಮಹಿಳೆಯರ ಸಬಲೀಕರಣಕ್ಕೆ ಒತ್ತು ನೀಡುತ್ತಿದ್ದೆವು ಎಂದರು.

ಮಹಿಳೆಯರು ತಾವು ಸಂಪಾದಿಸಿದ ಹಣ ಸಂಗ್ರಹಿಸಲು ಆರಂಭಿಸಿದರು. ಇನ್ನು ಯುವಕರಿಗೆ ಸಹಾಯ ಮಾಡಲು ಸೋಶಿಯಲ್ ಬಿಸಿನೆಸ್ ಫಂಡ್ ತೆರೆದೆವು. ಇದರ ಮೂಲಕ ಯುವಕರ ಆಲೋಚನೆಗಳಿಗೆ ಬಂಡವಾಳ ಹೂಡಿಕೆ ಮಾಡಿ ಅವರನ್ನು ಸ್ವಯಂ ಉದ್ಯೋಗಿಗಳನ್ನಾಗಿ ರೂಪಿಸುವಲ್ಲಿ ಸಹಾಯವಾಯಿತು ಎಂದರು.

ಎಸ್‌ಇಟಿ ಗೌರವ ಕಾರ್ಯದರ್ಶಿ ಡಾ.ಪಿ. ಪೂಡೇ ಕೃಷ್ಣ, ಕಾಲೇಜು ನಿರ್ದೇಶಕ ಡಾ. ಎಂ.ಪ್ರಕಾಶ್, ಪ್ರಾಂಶುಪಾಲ ಡಾ.ಎಸ್. ಎನ್.ವೆಂಕಟೇಶ್ ಇದ್ದರು.

> ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ರೂಪಿಸುವ ಮುಖೇನ ಯುವಕರು ಉದ್ಯೋಗ ಹುಡುಕಿಕೊಂಡು ಹೋಗುವ ಬದಲು ತಾವೇ ಉದ್ಯೋಗಸ್ಥರಾಗುವ ಆಲೋಚನೆ ಮಾಡಬೇಕು. ಇದರಿಂದ ಸಾಕಷ್ಟು ಜನರಿಗೆ ಉದ್ಯೋಗ ಕಲ್ಪಿಸಿದಂತಾಗುತ್ತದೆ.
>
> -ಪ್ರೊ.ಮಹಮದ್ ಯೂನಿಸ್
> ನೊಬೆಲ್ ಪುರಸ್ಕೃತ

> ಯುವಕರು ತಮ್ಮ ಅಮೂಲ್ಯ ಕ್ಷಣಗಳನ್ನು ವ್ಯರ್ಥ ಮಾಡಬಾರದು. ಪಠ್ಯದ ಜತೆಗೆ ಸೃಜನಶೀಲ ಕಲೆಗಳನ್ನು ಅಳವಡಿಸಿಕೊಂಡು ಭವಿಷ್ಯದಲ್ಲಿ ಯಶಸ್ಸು ಕಾಣಬೇಕು. ಮಹಿಳೆಯರಿಗೆ ಗೌರವ ನೀಡುವುದನ್ನು ಕಲಿತುಕೊಳ್ಳಬೇಕು.
>
> -ಎನ್.ಆರ್.ಪಂಡಿತಾರಾಧ್ಯ
> ಶೇಷಾದ್ರಿಪುರಂ ಶಿಕ್ಷಣ ದತ್ತಿ
> (ಎಸ್‌ಇಟಿ)ಅಧ್ಯಕ್ಷ

ಸಂಯುಕ್ತ ಕರ್ನಾಟಕ
ಮಂಗಳವಾರ, 07, ಫೆಬ್ರವರಿ, 2017, ಬೆಂಗಳೂರು



ಗ್ರಾಮೀಣ ಬ್ಯಾಂಕ್ ಆಫ್ ಬಾಂಗ್ಲಾದೇಶ ಸಂಸ್ಥಾಪಕ ಹಾಗೂ ನೊಬೆಲ್ ಪ್ರಶಸ್ತಿ ವಿಜೇತ ಮೊಹಮ್ಮದ್ ಯೂನಸ್ ಅವರು ಯಲಹಂಕದಲ್ಲಿರುವ ಶೇಷಾದ್ರಿಪುರ ಕಾಲೇಜಿನ ಬೆಳ್ಳಿ ಮಹೋತ್ಸವದಲ್ಲಿ ಭಾಗವಹಿಸಿದ್ದರು.

ಸಂಜೆವಾಣಿ

ಮಂಗಳವಾರ 7 ಜನವರಿ 2017

# ಉದ್ಯೋಗಪತಿಗಳಾಗಿ ಯುವಕರಿಗೆ ಮನವಿ



ನೊಬೆಲ್ ಶಾಂತಿ ಪ್ರಶಸ್ತಿ ಪುರಸ್ಕೃತರಾದ ಪ್ರೊ. ಮಹಮದ್ ಯುನಿಸ್‌ರವರನ್ನು ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ ಸಮಾರಂಭದಲ್ಲಿ ಉದ್ಘಾಟಿಸಲಾಯಿತು. ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಪ್ರಾಂಶುಪಾಲ ವೆಂಕಟೇಶ್ ಮತ್ತಿತರರು ಇದ್ದಾರೆ.

ಯಲಹಂಕ, ಫೆ. 7– ಯುವಕರು ಉದ್ಯೋಗ ಅರಸಿಕೊಂಡು ಹೋಗುವ ಬದಲು ತಾವೇ ಉದ್ಯೋಗಸ್ಥರಾಗುವ ಮೂಲಕ ಇನ್ನಷ್ಟು ನಿರುದ್ಯೋಗಿಗಳಿಗೆ ಉದ್ಯೋಗ ನೀಡುವಂತಾಗಬೇಕೆಂದು ನೊಬೆಲ್ ಶಾಂತಿ ಪ್ರಶಸ್ತಿ ಪುರಸ್ಕೃತ ಪ್ರೊ. ಮೊಹಮ್ಮದ್ ಯುನಿಸ್ ಅವರು ಹೇಳಿದ್ದಾರೆ.

ಇಲ್ಲಿನ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ರಜತ ಮಹೋತ್ಸವದ ಅಂಗವಾಗಿ ತಮಗೆ ನಡೆದ ಸನ್ಮಾನಕ್ಕೆ ಕೃತಜ್ಞತೆ ಸಲ್ಲಿಸಿ ಮಾತನಾಡಿದ ಅವರು, ಯುವ ಜನತೆಗೆ ಇಚ್ಛಾಶಕ್ತಿ, ಕಲ್ಪನಾಶಕ್ತಿ ಇರಬೇಕು. ಸಮಾಜದಿಂದ ಉದ್ಯೋಗ ಬೇಡದೆ ಉದ್ಯೋಗವನ್ನು ಸೃಷ್ಟಿಸುವಂತವರಾಗಬೇಕು ಎಂದು ಹೇಳಿದರು.

ಗ್ರಾಮೀಣ ಮಹಿಳೆಯರು ಆರ್ಥಿಕವಾಗಿ ಸದೃಢಗೊಂಡರೆ ಇಡೀ ದೇಶ ಸ್ವಾವಲಂಬನೆಯಾಗಿ ಬಡತನ ನಿರ್ಮೂಲನೆಗೊಳ್ಳುವುದರಲ್ಲಿ ಸಂದೇಹವಿಲ್ಲ ಎಂದು ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಶಿಕ್ಷಣದತ್ತಿ ಅಧ್ಯಕ್ಷ ಎನ್.ಆರ್ ಪಂಡಿತಾರಾಧ್ಯ ಅವರು ಮಾತನಾಡಿ, ಯುವಕರು ತಮ್ಮ ಅಮೂಲ್ಯ ಕ್ಷಣಗಳನ್ನು ವ್ಯರ್ಥ ಮಾಡಬಾರದು. ಪಠ್ಯದ ಜೊತೆಗೆ ಸೃಜನಶೀಲರಾಗಿ ಆಲೋಚಿಸಬೇಕು ಎಂದು ಹೇಳಿದರು.

ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ ಕೃಷ್ಣ ಅವರು ಸ್ವಾಗತಿಸಿದರು. ಕಾಲೇಜಿನ ಪ್ರಾಂಶುಪಾಲರಾದ ಡಾ. ಎಸ್.ಎನ್. ವೆಂಕಟೇಶ್ ಅವರು ರಜತ ಮಹೋತ್ಸವದ ಸಂಭ್ರಮಕ್ಕೆ ಕಾರಣವಾದ ಕಾಲೇಜು ನಡೆದು ಬಂದ ಹಾದಿಯನ್ನು ಪರಿಚಯಿಸಿದರು.

ಸಂಸ್ಥೆಯ ಅಧ್ಯಯನ ನಿರ್ದೇಶಕ ಡಾ. ಎಂ. ಪ್ರಕಾಶ್ ಹಾಗೂ ಬಯೋಟೆಕ್ನಾಲಜಿ ಮುಖ್ಯಸ್ಥ ಪ್ರೊ. ಸಂತನೂರ್ ದಾಸ್ ಮತ್ತು ಅಧ್ಯಾಪಕಿ ಪ್ರೊ. ಸಲ್ಮಾಭಾನು ಅವರು ಉಪಸ್ಥಿತರಿದ್ದರು.

ಸಂಜೆವಾಣಿ ಮಂಗಳವಾರ, ಜನವರಿ 31, 2017



ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಕೆ.ಎಂ. ನಂಜಪ್ಪ ಸ್ಮಾರಕ ವತಿಯಿಂದ ನಡೆದ ಸ್ವಯಂಪ್ರೇರಿತ ರಕ್ತದಾನ ಶಿಬಿರವನ್ನು ಮೇಯರ್ ಜಿ. ಪದ್ಮಾವತಿ ಉದ್ಘಾಟಿಸಿದರು. ಚಿತ್ರನಟ ಪೃಥ್ವಿ, ಡಾ. ವೊಡೆ ಪಿ. ಕೃಷ್ಣ, ರಾಜು ಚಂದ್ರಶೇಖರ್, ಡಾ. ಎಂ. ಪ್ರಕಾಶ್, ಸರೋಜ ಕೆ. ನಂಜಪ್ಪ, ಡಾ. ಅನುರಾಧ ರಾಯ್ ಮತ್ತಿತರರು ಉಪಸ್ಥಿತರಿದ್ದರು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ

ಭಾನುವಾರ 29 ಜನವರಿ 20
» 29 JANUARY 201




ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆ ಆಯೋಜಿಸಿದ್ದ ಗಣರಾಜ್ಯೋತ್ಸವದಲ್ಲಿ ಸುಪ್ರೀಂಕೋರ್ಟ್ ನಿವೃತ್ತ ನ್ಯಾಯಮೂರ್ತಿ ವಿ. ಗೋಪಾಲಗೌಡ ಅವರನ್ನು ಸನ್ಮಾನಿಸಲಾಯಿತು. ಸಂಸ್ಥೆಯ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಸಹ ಕಾರ್ಯದರ್ಶಿ ಸರೋಜಾ ನಂಜಪ್ಪ, ಡಾ. ಎಂ. ಪ್ರಕಾಶ್ ಮತ್ತಿತರರಿದ್ದರು.




## ಸಾಹಿತ್ಯ ಸಾಂಸ್ಕೃತಿಕ

» ಸವಿಗಾನ ಯಾನ: ವಿಜಯ ನಗರ ಸಾಂಸ್ಕೃತಿಕ ಕಲಾಕೇಂದ್ರ, ಸವಿಗಾನಲಹರಿ ಸುಗಮ ಸಂಗೀತ ಶಾಲೆ ಆಯೋಜನೆ. ಸವಿಗಾನ ಯಾನ–2017 ನಾಡಿನ ಸುಪ್ರಸಿದ್ಧ ದಾಸ-ಸಂತ-ಕವಿವರೇಣ್ಯರ ಗೀತ ಗಾಯನ ಪ್ರಸ್ತುತಿ. ಮುಖ್ಯಅತಿಥಿಗಳು: ಕವಿ ಸಾಹಿತಿಗಳಾದ ಎಂ.ಎನ್. ವ್ಯಾಸರಾವ್, ವಿ.ವಿ. ಗೋಪಾಲ್. ಸ್ಥಳ: ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಸಂಜೆ 5ಕ್ಕೆ.



» ನಾಟಕ: ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರದೊಡ್ಡಿ ಹಾಗೂ ಸಾರ್ವಜನಿಕ ಗ್ರಂಥಾಲಯ ಇಲಾಖೆ ಆಯೋಜನೆ. ಓದಿನರಮನೆಯಲ್ಲಿ ತಿಂಗಳ ಓದು-128 ಕಾರ್ಯಕ್ರಮದ ಪ್ರಯುಕ್ತ ರಂಗಕಿರಣ ಅರ್ಪಿಸುವ ಕ್ರಾಸ್‌ಬೆಲ್ಟ್ - ಸತ್ಯಮೇವ ಜಯತೆ ನಾಟಕ ಪ್ರದರ್ಶನ. ಮಲಯಾಳಂ ಮೂಲ: ಎನ್.ಎನ್. ಪಿಳ್ಳೈ, ಕನ್ನಡಕ್ಕೆ: ಕಾಮಿನೀಧರನ್, ರೇಣುಕಾರೆಡ್ಡಿ. ವಿನ್ಯಾಸ, ನಿರ್ದೇಶನ: ರೇಣುಕಾರೆಡ್ಡಿ. ಸ್ಥಳ: ಗ್ರಂಥಾಂಗಣ, ನಗರ ಕೇಂದ್ರ ಗ್ರಂಥಾಲಯ, ಪಶ್ಚಿಮ ವಲಯ, ಹಂಪಿನಗರ. ಸಂಜೆ 6.30ಕ್ಕೆ.

» ಸಂವಾದ: ಪ್ರೊ. ಬಿ.ಎಸ್. ಪದ್ಮನಾಭ ಬಳಗ ಆಯೋಜನೆ. 91ನೇ



ಜನ್ಮದಿನಾಚರಣೆ ನಿಮಿತ್ತ ಪ್ರೊ. ಬಿ.ಎಸ್. ಪದ್ಮನಾಭ ಅವರೊಂದಿಗೆ ಒಂದು ಆತ್ಮೀಯ ಸಂವಾದ ಕಾರ್ಯಕ್ರಮ. ಉಪಸ್ಥಿತಿ: ವಚನ ಸಾಹಿತ್ಯ ವಾಗ್ಮಿ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ನ್ಯಾಷನಲ್ ಕಾಲೇಜು ನಿವೃತ್ತ ಪ್ರಾಧ್ಯಾಪಕ ಪ್ರೊ. ಎಂ.ಎಸ್. ವೆಂಕಟರಾಮ್, ವಾಸವಿ ವಿದ್ಯಾನಿಕೇತನ ಅಧ್ಯಕ್ಷ ಕೆ.ಬಿ. ಸುಬ್ಬರಾಜು, ಡಿ. ದೇವರಾಜ ಅರಸ್ ಸಂಶೋಧನಾ ಸಂಸ್ಥೆ ನಿರ್ದೇಶಕ ಪ್ರೊ. ಎಸ್.ವಿ. ನರಸಿಂಹಯ್ಯ, ಶೇಷಾದ್ರಿಪುರ ವಿದ್ಯಾಸಂಸ್ಥೆಗಳ ಸಮೂಹದ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ. ಸ್ಥಳ: ಉದಯಭಾನು ಕಲಾಸಂಘ ಸಾಂಸ್ಕೃತಿಕ ಭವನ, ಗವಿಪುರ ಸಾಲು ಛತ್ರಗಳ ಎದುರು, ಕೆಂಪೇಗೌಡನಗರ, ಸಂಜೆ 5.30ಕ್ಕೆ.

» ಚಿತ್ರಪ್ರದರ್ಶನ: ದಿ ಬೆಂಗಳೂರು ಸೈನ್ಸ್ ಫೋರಂ ಆಯೋಜನೆ. ಜನವರಿ ತಿಂಗಳ ಕಾರ್ಯಕ್ರಮ. ವಿಜ್ಞಾನ ವಿಷಯದ ಚಲನಚಿತ್ರ ಪ್ರದರ್ಶನ. ಸ್ಥಳ: ಡಾ. ಎಚ್.ಎನ್. ಮಲ್ಟಿಮೀಡಿಯಾ ಕಾನ್ಫರೆನ್ಸ್ ಹಾಲ್, ನ್ಯಾಷನಲ್ ಕಾಲೇಜು, ಬಸವನಗುಡಿ, ಸಂಜೆ 6ಕ್ಕೆ.

» ಮಾರ್ಗಶೀರ್ಷೋತ್ಸವ: ಶ್ರೀ ಸುರಭಾರತೀ ಸಂಸ್ಕೃತ ಸಂಸ್ಕೃತಿ ಪ್ರತಿಷ್ಠಾನ ಆಯೋಜನೆ. ಸಂಜೆ 6.30ರಿಂದ ವಿದುಷಿ ನಿತ್ಯಶ್ರೀ ಮಹಾದೇವನ್ ಮತ್ತು ತಂಡದಿಂದ ಕರ್ನಾಟಕ ಶಾಸ್ತ್ರೀಯ ಸಂಗೀತ ಕಾರ್ಯಕ್ರಮ. ಸ್ಥಳ: ಶ್ರೀ ಭಾರತೀತೀರ್ಥ ಸಭಾ ಮಂಟಪ, ಸರ್ವೀಸ್ ರಸ್ತೆ, ವಾಟರ್ ಟ್ಯಾಂಕ್ ಹತ್ತಿರ, ಎಚ್‌ಆರ್‌ಬಿಆರ್ ಬಡಾವಣೆ 1ನೇ ಹಂತ.



» ಸಿ.ಜಿ.ಕೆ. ನೆನಪು: ರಂಗನಿರಂತರ ಆಯೋಜನೆ. ಮಾಂತ್ರಿಕ ನಾಟಕದ 25ನೇ ಪ್ರದರ್ಶನದೊಂದಿಗೆ ಹತ್ತನೇ ವರ್ಷದ ಸಿ.ಜಿ.ಕೆ. ನೆನಪು ಕಾರ್ಯಕ್ರಮ ಆಚರಣೆ. ನಾಟಕ ನಿರ್ದೇಶನ: ಬಿ.ಜಿ. ರಾಮಕೃಷ್ಣ. ಮುಖ್ಯಅತಿಥಿ: ಎಸ್.ಜಿ. ಸಿದ್ದರಾಮಯ್ಯ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು ಹಾಗೂ ಡಾ. ಎಂ.ಎಸ್. ಮೂರ್ತಿ, ಲಲಿತಕಲಾ ಅಕಾಡೆಮಿ ಅಧ್ಯಕ್ಷರು. ಸ್ಥಳ: ಕಲಾಗ್ರಾಮ ಸಮುಚ್ಚಯ, ಮಲ್ಲತ್ತಹಳ್ಳಿ, ಸಂಜೆ 6.30ಕ್ಕೆ.

### ಓದುಗರ ಗಮನಕ್ಕೆ

ಸಾಹಿತ್ಯ, ಸಂಗೀತ, ನಾಟಕ, ಯಕ್ಷಗಾನ, ಕಲಾಪ್ರದರ್ಶನ, ಕೃತಿ ಲೋಕಾರ್ಪಣೆ, ಇತರ ಸಾಂಸ್ಕೃತಿಕ ಮತ್ತು ಸಮಾಜಮುಖಿ ಕಾರ್ಯಕ್ರಮಗಳ ಕುರಿತ ಮುಂಚಿತ ಮಾಹಿತಿ ಮತ್ತು ನಡೆದ ಕಾರ್ಯಕ್ರಮದ ವರದಿ ಛಾಯಾಚಿತ್ರಗಳನ್ನು ವಿಜಯವಾಣಿ ಓದುಗರು ಕಳುಹಿಸಬಹುದು. ವಿಳಾಸ: ಬೆಂಗಳೂರು ಸಿಟಿ ಬೀಟ್ ವಿಭಾಗ ವಿಜಯವಾಣಿ ನಂ.24, ಸಾಯಿರಾಂ ಟವರ್ಸ್, 1ನೇ ಮಹಡಿ, 5ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು-560018. ದೂರವಾಣಿ: 080 26257400 ಇಮೇಲ್: vijayacitybeat@gmail.com

## ನಾಟಕ

» ನಾಟಕೋತ್ಸವ: ರಂಗಶಂಕರ ಆಯೋಜನೆ. ಜನವರಿ ನಾಟಕೋತ್ಸವ. ನಾಟಕ: ಕೊಪನ್ ಹೇಗನ್. ಇಂಗ್ಲಿಷ್ ಮೂಲ: ಮೈಕೇಲ್ ಫ್ರೇಯ್ನ್. ಕನ್ನಡಾನುವಾದ ಮತ್ತು ನಿರ್ದೇಶನ: ಪ್ರಕಾಶ ಬೆಳವಾಡಿ. ಅಭಿನಯ ತಂಡ: ಬೆಂಗಳೂರಿನ ಸೆಂಟರ್‌ಫಾರ್ ಫಿಲ್ಮ್ ಆ್ಯಂಡ್ ಡ್ರಾಮಾ. ಸ್ಥಳ: ರಂಗಶಂಕರ, ಸಂಜೆ 7.30ಕ್ಕೆ.

## ಇತರೆ

» ತಜ್ಞರ ಸಮ್ಮೇಳನ: ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಬಿಸಿನೆಸ್ ಮ್ಯಾನೇಜ್‌ಮೆಂಟ್ ಆಯೋಜನೆ. ಯಾಲೆ ಚೈನಾ-ಇಂಡಿಯಾ ಇನ್‌ಸ್ಟಿಟ್ಯೂಟ್ ನಿರ್ದೇಶಕ ಪ್ರೊ. ಕೆ. ಸುಧೀರ್ ಅವರಿಂದ ಪ್ರೌಢ ಉಪನ್ಯಾಸ. ಸ್ಥಳ: ಬಿಳೇಕಹಳ್ಳಿ, ಎಸ್‌ಆರ್ ಶೆಟ್ಟಿ ನಗರ, ಬನ್ನೇರುಘಟ್ಟ ರಸ್ತೆ, ಬೆಳಗ್ಗೆ 9.30ಕ್ಕೆ.

» ಪ್ರೌಢಶಾಲಾ ವಾರ್ಷಿಕೋತ್ಸವ: ಜೆಎಸ್‌ಎಸ್ ಪ್ರೌಢಶಾಲೆ ಆಯೋಜನೆ. ಶಾಲಾ ವಾರ್ಷಿಕೋತ್ಸವ. ಬೆಳಗ್ಗೆ 10ಕ್ಕೆ ಉದ್ಘಾಟನೆ. ಅತಿಥಿ: ಕಿರುತೆರೆ ನಟಿ ಚಿತ್ಕಲಾ ಬಿರಾದಾರ, ಕ್ವಿಜ್ ಮಾಸ್ಟರ್ ಡಾ. ನಾ. ಸೋಮೇಶ್ವರ, ಅಧ್ಯಕ್ಷತೆ: ಕ್ಷೇತ್ರ ಶಿಕ್ಷಣಾಧಿಕಾರಿ ಕೆ.ಎಲ್. ರಮೇಶಯ್ಯ. ಮಧ್ಯಾಹ್ನ 2ರಿಂದ ಸಾಂಸ್ಕೃತಿಕ ಕಾರ್ಯಕ್ರಮ. ಅಧ್ಯಕ್ಷತೆ: ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ. ಬಸವರಾಜ ಸಾದರ, ಬಹುಮಾನ ವಿತರಣೆ: ಕಿರಣ ಪ್ರಸಾದ್ ರಾಜನಹಳ್ಳಿ. ಅತಿಥಿ: ನೃತ್ಯ ಕಲಾವಿದೆ, ನಟಿ ಮಾನಸ ಜೋಷಿ. ಸ್ಥಳ: ಶಿವರಾತ್ರೀಶ್ವರ ಕೇಂದ್ರ, ಜಯನಗರ, 8ನೇ ಬಡಾವಣೆ.

» ಕ್ಯಾನ್ಸರ್ ಜಾಗೃತಿ: ಜಾಗೃತಿ ಸಂಸ್ಥೆ ಆಯೋಜನೆ. ಧೂಮಪಾನಿಗಳಿಗೆ ಹೂವು ನೀಡಿ, ಕ್ಯಾನ್ಸರ್ ತಡೆಗಟ್ಟಿ ಎಂಬ ಜಾಗೃತಿ ಕಾರ್ಯಕ್ರಮ. ಅತಿಥಿ: ಪತ್ರಕರ್ತ ರವಿಕುಮಾರ್, ವಕೀಲರ ವೇದಿಕೆ ಅಧ್ಯಕ್ಷ ಜ್ಞಾನ ಪ್ರಕಾಶ್, ನಟಿ ಪಂಕಜಾ ರವಿಶಂಕರ್, ಶಿಕ್ಷಕಿ ಕಲಾವತಿ, ಕಸ್ತೂರಿ ಯುವಕ ಸಂಘದ ಅಧ್ಯಕ್ಷ ರಾಮಲಿಂಗ, ಗ್ರಾಹಕ ಹಕ್ಕು ವೇದಿಕೆ ಕಾರ್ಯದರ್ಶಿ ಎಂ. ನಿಜಾಮುದ್ದೀನ್. ಸ್ಥಳ: ಗಣೇಶ ದೇವಾಲಯ ಹಿಂಭಾಗ, ಅಕ್ಕಿತಿಮ್ಮನಹಳ್ಳಿ, ಶಾಂತಿನಗರ, ಬೆಳಗ್ಗೆ 10.30ಕ್ಕೆ.

» ಕಾಲೇಜಿನಿಂದ ಕಾಲೇಜಿಗೆ ವಿವೇಕಾನಂದ: ಸ್ವಾಮಿ ವಿವೇಕಾನಂದ ಪ್ರಸಾರ ಕೇಂದ್ರ ಆಯೋಜನೆ. ವಿವೇಕಾನಂದ ಸ್ವದೇಶ ಮಂತ್ರ ಪ್ರಸಾರ ಕಾರ್ಯಕ್ರಮ. ಬೆಳಗ್ಗೆ 11ಕ್ಕೆ ಜಿಆರ್‌ವಿ ಬಿಜಿನೆಸ್ ಮ್ಯಾನೇಜ್‌ಮೆಂಟ್ ಅಕಾಡೆಮಿಯಲ್ಲಿ ಕಾರ್ಯಕ್ರಮ. ಅಧ್ಯಕ್ಷತೆ: ಗುರುರಾಜ್, ಜಿಆರ್‌ವಿ ವಿದ್ಯಾಸಂಸ್ಥೆ ಅಧ್ಯಕ್ಷರು. ಅತಿಥಿಗಳು: ಸುನಂದಾ ಪ್ರಭುದೇವ್, ಸುನಂದಾ ಸಾಹಿತ್ಯ ವೇದಿಕೆ ಸಂಸ್ಥಾಪಕಿ ಹಾಗೂ ಜಿ.ಆರ್. ಸತ್ಯಮೂರ್ತಿ, ಭಾಷಾ ಪರಿಣತರು. ಸಂಜೆ 7.30ಕ್ಕೆ ಚಾಮರಾಜಪೇಟೆ ಸಂಜೆ ಪಿ.ಯು. ಕಾಲೇಜು. ಅಧ್ಯಕ್ಷತೆ: ರವಿಕಾಂತ್, ವಿಮಲಾ ಶಂಕರ್ ಶಿಕ್ಷಣ ಸಂಸ್ಥೆ ಕಾರ್ಯದರ್ಶಿ. ಅತಿಥಿಗಳು: ಶಾರದಾ ಸೇವಾಶ್ರಮದ ಸೋದರಿ ಚಂದ್ರಿಕಾ ಹಾಗೂ ಸೋದರಿ ಸುಜಾತಾ.

» ಜಾನಪದ ಸಂಗೀತ: ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಆಯೋಜನೆ. ಜಾನಪದ ಗೀತ ಗಾಯನ. ಗೌರಮ್ಮ ಮತ್ತು ಸಂಗಡಿಗರಿಂದ. ಸ್ಥಳ: ವಾಡಿಯಾ ಸಭಾಂಗಣ, ಬಸವನಗುಡಿ, ಸಂಜೆ 6ಕ್ಕೆ.

## ಧಾರ್ಮಿಕ

» ಉಪನ್ಯಾಸ: ಪರಮಾರ್ಥ ವಿಚಾರ ಸಂಘ ಟ್ರಸ್ಟ್ ಆಯೋಜನೆ. 'ಅಪ್ರತಿಷ್ಠಿತಸ್ವರ್ಗ' ಕುರಿತು ಡಾ. ಕೆ.ಜಿ. ಸುಬ್ರಾಯ ಶರ್ಮಾ ಉಪನ್ಯಾಸ. ಸ್ಥಳ: ಅಧ್ಯಾತ್ಮ ಮಂದಿರ, ನ್ಯಾಷನಲ್ ಹೈಸ್ಕೂಲ್ ರಸ್ತೆ, ವಿಶ್ವೇಶ್ವರಪುರ. ಬೆಳಗ್ಗೆ 7.45ಕ್ಕೆ.

» ಉಪನ್ಯಾಸ: ವೇದಾಂತ ಸತ್ಸಂಗ ಕೇಂದ್ರ ಆಯೋಜನೆ. 'ಗೋತ್ವಾದಿಲಕ್ಷಣಂ' ಕುರಿತು ವಿದ್ವಾನ್ ಡಾ. ಕೆ.ಜಿ. ಸುಬ್ರಾಯ ಶರ್ಮಾ ಉಪನ್ಯಾಸ. ಸ್ಥಳ: ವೇದಾಂತ ನಿಲಯ, 1ನೇ ಮುಖ್ಯರಸ್ತೆ, ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನದ ಹತ್ತಿರ, ಸಾಕಮ್ಮ ಗಾರ್ಡನ್, ಬಸವನಗುಡಿ. ಬೆಳಗ್ಗೆ 9ಕ್ಕೆ.

» ಉಪನ್ಯಾಸ: ಅಧ್ಯಾತ್ಮ ಪ್ರಕಾಶ ಕಾರ್ಯಾಲಯ ಆಯೋಜನೆ. ಬೃಹದಾರಣ್ಯಕೋಪನಿಷದ್ಭಾಷ್ಯ ಕುರಿತು ಸುದರ್ಶನ ಶರ್ಮಾ ಉಪನ್ಯಾಸ. ಸ್ಥಳ: ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಎಪಿಕೆ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ. ಬೆಳಗ್ಗೆ 9.30ರಿಂದ.

» ಬ್ರಹ್ಮರಥೋತ್ಸವ: ಶ್ರೀ ಬನಶಂಕರಿ ದೇವಸ್ಥಾನ ಆಯೋಜನೆ. ಶ್ರೀ ಬನಶಂಕರಿ ದೇವಿಯ ಬ್ರಹ್ಮರಥೋತ್ಸವದ ಪ್ರಯುಕ್ತ ನವ ಚಂಡಿಕಾ ಹೋಮ. ಸಂಜೆ 5ಕ್ಕೆ ಎ. ಕುಸುಮಾ ಅವರಿಂದ ಭರತನಾಟ್ಯ ಕಾರ್ಯಕ್ರಮ. ಸ್ಥಳ: ದೇವಸ್ಥಾನದ ಆವರಣ, ಎಸ್. ಕರಿಯಪ್ಪ ರಸ್ತೆ.

» ಪ್ರವಚನ: ಶ್ರೀ ಶಂಕರಜಯಂತಿ ಸಭಾ (ಶ್ರೀ ಶೃಂಗೇರಿ ಶಾರದಾಪೀಠದ ಅಂಗಸಂಸ್ಥೆ) ಆಯೋಜನೆ. ಎಚ್.ಕೆ. ಶ್ರುತಿ ಪ್ರವಚನ. ಸ್ಥಳ: ಶಂಕರಮಠ, ಶಂಕರಪುರ. ಸಂಜೆ 6ರಿಂದ.

» ಪ್ರವಚನ: ಶ್ರೀ ಶಂಕರಜಯಂತಿ ಮಂಡಲಿ ಆಯೋಜನೆ. 'ಮಾನಸೋಲ್ಲಾಸ' ಕುರಿತು ವಿದ್ವಾನ್ ಸುದರ್ಶನ ಶರ್ಮಾ ಪ್ರವಚನ. ಸ್ಥಳ: ನಂ. 45, ಶಂಕರಕೃಪಾ ರಸ್ತೆ, 16ನೇ ಅಡ್ಡರಸ್ತೆ, ಜಯನಗರ 3ನೇ ಬಡಾವಣೆ. ಸಂಜೆ 6ರಿಂದ.

» ಪ್ರವಚನ: ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆ ಆಯೋಜನೆ. 'ಭಾರತೀಯ ಸಂಸ್ಕೃತಿಯಲ್ಲಿ ತೀರ್ಥ ಮತ್ತು ಕ್ಷೇತ್ರ' ಕುರಿತು ಶತಾವಧಾನಿ ಡಾ. ರಾ. ಗಣೇಶ್ ಪ್ರವಚನ. ಸ್ಥಳ: ಸಂಸ್ಥೆ ಆವರಣ, ಬಸವನಗುಡಿ ರಸ್ತೆ, ನರಸಿಂಹರಾಜ ಕಾಲನಿ. ಸಂಜೆ 6ರಿಂದ.

» ಆರಿದ್ರೋತ್ಸವ: ಬೆಂಗಳೂರು ಅಯೋಧ್ಯಾನಗರದ ಶಿವಾಚಾರ ವೈಶ್ಯ (ನಗರ್ತ) ಸಮಿತಿ, ಶ್ರೀ ನಗರೇಶ್ವರಸ್ವಾಮಿ ದೇವಾಲಯ ಆಯೋಜನೆ. ಆರಿದ್ರೋತ್ಸವ ಪ್ರಯುಕ್ತ ಬೆಳಗ್ಗೆ 9ರಿಂದ ಅಭಿಷೇಕ, ಆರಿದ್ರೋತ್ಸವ ಕಲಶ ಸ್ಥಾಪನೆ. ಸ್ಥಳ: ಶ್ರೀ ನಗರೇಶ್ವರ ಸ್ವಾಮಿ ದೇವಾಲಯ, ನಗರ್ತರ ಪೇಟೆ.



» ಉಪನ್ಯಾಸ: ರಾಗಿಗುಡ್ಡದ ಶ್ರೀ ಪ್ರಸನ್ನ ಆಂಜನೇಯಸ್ವಾಮಿ ಧರ್ಮಮಂಡಲಿ ಟ್ರಸ್ಟ್ ಆಯೋಜನೆ. ವಿದ್ವಾನ್ ಕೆ.ಕೆ. ಶೇಷಾದ್ರಿ ಉಪನ್ಯಾಸ. ವಿಷಯ: ದೇವರು-ಪರಮಾತ್ಮ ಮತ್ತು ಗಾಯತ್ರಿ ಮಂತ್ರ. ಸ್ಥಳ: ಸಾಂಸ್ಕೃತಿಕ ಮಂದಿರ, ಜಯನಗರ 9ನೇ ಬಡಾವಣೆ. ಸಂಜೆ 6.30ರಿಂದ.

» ಪ್ರವಚನ: ಶ್ರೀ ರಾಘವೇಂದ್ರ ಗುರು ಸೇವಾ ಮಂಡಳಿ ಆಯೋಜನೆ. ಜಯಸಿಂಹಾಚಾರ್ಯ ಪ್ರವಚನ. ವಿಷಯ: ಶ್ರೀಮದ್‌ಭಗವದ್ಗೀತಾ. ಸ್ಥಳ: ಮಂಡಳಿ ಆವರಣ, ನಂ. 145, 13ನೇ ಎ ಮುಖ್ಯರಸ್ತೆ, 3ನೇ ಅಡ್ಡರಸ್ತೆ, ಗೋಕುಲ 1ನೇ ಹಂತ, ಮತ್ತೀಕೆರೆ. ಸಂಜೆ 7ಕ್ಕೆ.

» ಪ್ರವಚನ: ಶ್ರೀ ರಾಘವೇಂದ್ರ ಸ್ವಾಮಿಗಳ ಮಠ ಆಯೋಜನೆ. 'ಹರಿದಾಸ ಸಾಹಿತ್ಯ' ಕುರಿತು ಗುಲ್ಬರ್ಗ ಗುರುರಾಜದಾಸ್ ಪ್ರವಚನ. ಸ್ಥಳ: ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನ ಸನ್ನಿಧಿ ಟ್ರಸ್ಟ್, ನಂ. 1106, 11ನೇ ಮುಖ್ಯರಸ್ತೆ, 6ನೇ ಅಡ್ಡರಸ್ತೆ, ಪ್ರಕಾಶ್‌ನಗರ. ಸಂಜೆ 7 ಗಂಟೆಗೆ.

» ಆರಾಧನೆ: ಶ್ರೀ ದಿಗ್ವಿಜಯ ಲಕ್ಷ್ಮೀನರಸಿಂಹ ಸನ್ನಿಧಾನ ಆಯೋಜನೆ. ಶ್ರೀ 1008 ಶ್ರೀ ರಘೂತ್ತಮ ತೀರ್ಥರ ಆರಾಧನಾ ಮಹೋತ್ಸವದ ಅಂಗವಾಗಿ ಮಧ್ಯಾರಾಧನೆ. ಬೆಳಗ್ಗೆ 7.30ಕ್ಕೆ ಪಂಚಾಮೃತ, ಶ್ರೀಮಠದಲ್ಲಿ ಪಾದಪೂಜೆ, ಸರ್ವಮೂಲ ಪಾರಾಯಣ, ಶ್ರೀಸೂಕ್ತ ಧನ್ವಂತರಿಹೋಮ, ಅಷ್ಟೋತ್ತರ. ಸಾನ್ನಿಧ್ಯ: ಶ್ರೀ ಸತ್ಯಾತ್ಮತೀರ್ಥರು. 10.30ಕ್ಕೆ ರಾಜಬೀದಿ ಉತ್ಸವ, 12.30ಕ್ಕೆ ಹಸ್ತೋದಕ, ಸಂಜೆ 6.30ಕ್ಕೆ ವಿದ್ಯಾರ್ಥಿಗಳು ಹಾಗೂ ವಿದ್ವಾಂಸರಿಂದ ಉಪನ್ಯಾಸ. 7.30ಕ್ಕೆ ನಾರಾಯಣ ಸರಳಾಯ ಸಂಗಡಿಗರಿಂದ ಭಕ್ತಿಸಂಗೀತ. ಸ್ಥಳ: ಶ್ರೀ ದಿಗ್ವಿಜಯ ಲಕ್ಷ್ಮೀನರಸಿಂಹ ಸನ್ನಿಧಾನ, ಪಂಪ ಮಹಾಕವಿ ರಸ್ತೆ. ಉತ್ತರಾದಿ ಮಠ, ಬಸವನಗುಡಿ.

## ವಿವಿಧೆಡೆ ಧನುರ್ಮಾಸ ಪೂಜೆ

» ಧನುರ್ಮಾಸ ಪಾರಾಯಣ: ಶ್ರೀ ಗುರುವಾಯುಪುರಪತಿ ಸೇವಾ ಮಂದಿರ ಟ್ರಸ್ಟ್ ಆಯೋಜನೆ. ಕೃಷ್ಣ ಮತ್ತು ಅಷ್ಟ ಲಕ್ಷ್ಮೀ ಸನ್ನಿಧಿಯಲ್ಲಿ ಧನುರ್ಮಾಸ ಪೂಜೆ. ಕೂಡಾರೈವಲ್ಲುಂ. ಬೆಳಗ್ಗೆ 5ಕ್ಕೆ ವಿಶ್ವರೂಪ ದರ್ಶನ, 6ಕ್ಕೆ ಭಗವದ್ ತಿರುವಾರಾಧನೆ. 6.15ಕ್ಕೆ ಶ್ರೀ ವಿಷ್ಣು ಸಹಸ್ರನಾಮ, 6.30ಕ್ಕೆ ತಿರುಪ್ಪಾವೈ ಪಾರಾಯಣ ಸೇವೆ, 7ಕ್ಕೆ ಮಹಾಮಂಗಳಾರತಿ, ಶಾತ್ತುಮೊರೈ, ತೀರ್ಥ ಪ್ರಸಾದ ವಿನಿಯೋಗ. ಸಂಜೆ 5ಕ್ಕೆ ಇರಾಪತ್ತು ಪಾರಾಯಣ. ಸ್ಥಳ: ಇಸ್ಕಾನ್ ಎದುರು, ರಾಜಾಜಿನಗರ.

» ಧನುರ್ಮಾಸ ಪೂಜೆ: ಶ್ರೀ ಸತ್ಯನಾರಾಯಣ, ಮುತ್ತಿನ ಆಂಜನೇಯ ದೇವಾಲಯ ಆಯೋಜನೆ. ಧನುರ್ಮಾಸ ಪೂಜೆ. ಸತ್ಯನಾರಾಯಣ, ಲಕ್ಷ್ಮೀ ಮತ್ತು ಮುತ್ತಿನ ಆಂಜನೇಯ ಸ್ವಾಮಿಗೆ ಬೆಳಗ್ಗೆ 4ಕ್ಕೆ ಪಂಚಾಮೃತ ಅಭಿಷೇಕ. 4.30ಕ್ಕೆ ವಿಶೇಷ ಅಲಂಕಾರ, 5.30ಕ್ಕೆ ನೈವೇದ್ಯ, 5.45ಕ್ಕೆ ಮಹಾಮಂಗಳಾರತಿ, 6ಕ್ಕೆ ತೀರ್ಥ ಪ್ರಸಾದ ವಿತರಣೆ. ನೇತೃತ್ವ: ವಿದ್ವಾನ್ ಸತ್ಯಪ್ರಕಾಶ ಆಚಾರ್. ಸ್ಥಳ: ದೇವಾಲಯ ಆವರಣ, 5ನೇ ಮುಖ್ಯರಸ್ತೆ, 6ನೇ ಅಡ್ಡರಸ್ತೆ, ಚಾಮರಾಜಪೇಟೆ.

» ಧನುರ್ಮಾಸ ವಿಶೇಷ: ಶ್ರೀ ಲಕ್ಷ್ಮೀ ಚಂದ್ರಲಾಪರಮೇಶ್ವರಿ ದೇವಾಲಯ ಆಯೋಜನೆ. ಧನುರ್ಮಾಸ ವಿಶೇಷ. ಬೆಳಗ್ಗೆ 4.30ಕ್ಕೆ ಸುಪ್ರಭಾತ, 5ಕ್ಕೆ ಅಭಿಷೇಕ, 6.15ಕ್ಕೆ ಮಹಾ ನೈವೇದ್ಯ, ಲಕ್ಷ್ಮೀಸ್ತೋತ್ರ ಪಾರಾಯಣ, 6.45ಕ್ಕೆ ಮಹಾಮಂಗಳಾರತಿ. ನೇತೃತ್ವ: ವಿದ್ವಾನ್ ಶ್ರೀನಿವಾಸ ಚಿಕ್ಕೇರೂರು. ಸ್ಥಳ: 20ನೇ ಮುಖ್ಯರಸ್ತೆ, 35ನೇ ಕ್ರಾಸ್ ಪಾರ್ಕ್, 4ನೇ ಟಿ ಬ್ಲಾಕ್, ಜಯನಗರ.

# ಅಭಿವ್ಯಕ್ತಿ ಕೇಂದ್ರವಾಗಲಿ ಸಬರಮತಿ ಆಶ್ರಮ

ಪ್ರಜಾವಾಣಿ ವಾರ್ತೆ

ಮೈಸೂರು: ಮಹಾತ್ಮ ಗಾಂಧೀಜಿಯ ಆಶಯಗಳನ್ನು ಸಾರುವ ಸಬರಮತಿ ಆಶ್ರಮವು ಅಭಿವ್ಯಕ್ತಿಯ ಕೇಂದ್ರವಾಗಲಿ ಎಂದು ಹಿರಿಯ ವಕೀಲ ಪ್ರೊ.ರವಿವರ್ಮಕುಮಾರ್ ಸಲಹೆ ನೀಡಿದರು.

ಮೈಸೂರು ವಿಶ್ವವಿದ್ಯಾನಿಲಯದ ಗಾಂಧಿ ಭವನದ ಆವರಣದಲ್ಲಿ ಸ್ಥಾಪಿಸಿರುವ ಸಬರಮತಿ ಆಶ್ರಮದ ಮಾದರಿ ಕಟ್ಟಡದ ಉದ್ಘಾಟನಾ ಸಮಾರಂಭದಲ್ಲಿ ಅವರು ಗಾಂಧಿ ಚಿಂತನೆಗಳ ಕುರಿತ ಪುಸ್ತಕಗಳನ್ನು ಸೋಮವಾರ ಬಿಡುಗಡೆಗೊಳಿಸಿ ಅವರು ಮಾತನಾಡಿದರು.

ದೇಶದ ಎಲ್ಲ ಸಮಸ್ಯೆಗಳಿಗೂ ಗಾಂಧಿತತ್ವಗಳಲ್ಲಿ ಪರಿಹಾರವಿದೆ. ಹಿಂಸೆಗೆ ಅಹಿಂಸೆ, ಅಸತ್ಯಕ್ಕೆ ಸತ್ಯ ಉತ್ತರ ಎಂದು ಗಾಂಧಿ ಸಾರಿ ಹೇಳಿದ್ದರು. ಅದಕ್ಕೆ ತಕ್ಕಂತೆ ಮೈಸೂರು ವಿ.ವಿ.ಯ ಗಾಂಧಿ ಭವನವು ಮೈಸೂರಿನಲ್ಲಿ ಪ್ರತಿಭಟನೆಗಳಿಗೆ ಕೇಂದ್ರವಾಗಿತ್ತು. ಪ್ರೊ.ಎಂ.ಡಿ.ನಂಜುಂಡಸ್ವಾಮಿ, ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಮುಂತಾದವರು ಇಲ್ಲಿ ಅನೇಕ ಪ್ರಗತಿಪರ ಚಳವಳಿಗಳನ್ನು ರೂಪಿಸುತ್ತಿದ್ದರು. ವಿಶ್ವವಿದ್ಯಾಲಯದಲ್ಲಿ ಆಗುತ್ತಿದ್ದ ಅನ್ಯಾಯಗಳನ್ನು ಪ್ರತಿಭಟಿಸಲೂ ಇದು ವೇದಿಕೆಯಾಗಿತ್ತು. ಈ ವಿಶೇಷ ಸ್ಥಳವು ಪ್ರತಿಭಟನೆಗಳ ಜನ್ಮಸ್ಥಳವಾಗಿತ್ತು ಎಂದು ಸ್ಮರಿಸಿದರು.

ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪೋಷಿಸುತ್ತಿದ್ದ ಗಾಂಧಿ ಭವನವು ಇನ್ನು ಮುಂದೆಯೂ ಸಮಾಜದ ಅನ್ಯಾಯಗಳನ್ನು ಪ್ರಶ್ನಿಸುವ ಕೇಂದ್ರವಾಗಬೇಕು. ಸಬರಮತಿ ಆಶ್ರಮದ ಮಾದರಿ ಕಟ್ಟಡವು ಅಭಿವ್ಯಕ್ತಿಗೆ ಸಂಕೇತವಾಗಬೇಕು ಎಂದು ಅವರು ಸಲಹೆ ನೀಡಿದರು.

ಮಾದರಿ ಆಶ್ರಮವನ್ನು ಉದ್ಘಾಟಿಸಿದ ಕುಲಪತಿ ಪ್ರೊ.ಕೆ.ಎಸ್.ರಂಗಪ್ಪ ಮಾತನಾಡಿ, ಒಳಿತಿನ ಚಿಂತನೆ ಸದಾ ಇರಬೇಕು. ಇದಕ್ಕೆ ಗಾಂಧಿತತ್ವಗಳ ಸಹಾಯ ಪಡೆಯಬೇಕು. ಮೈಸೂರು ವಿ.ವಿ.ಯ ಶತಮಾನೋತ್ಸವ ಆಚರಣೆಯ ಕೊಡುಗೆಯಾಗಿ ಈ ಆಶ್ರಮದ ಮಾದರಿಯನ್ನು ನಿರ್ಮಿಸಲಾಗಿದೆ. ಮತ್ತಷ್ಟು ಉತ್ತಮ ಕಾರ್ಯಗಳು ಗಾಂಧಿ ಭವನದಲ್ಲಿ ನಡೆಯಲಿ ಎಂದು ಅವರು ಆಶಿಸಿದರು.

ರಾಜ್‌ಘಾಟ್‌ನ ಮಹಾತ್ಮ ಗಾಂಧಿ ವಸ್ತುಸಂಗ್ರಹಾಲಯದ ನಿರ್ದೇಶಕ ಡಾ.ಎ.ಅಣ್ಣಾಮಲೈ, ಮಂಡ್ಯದ ಗಾಂಧಿ ಭವನದ ಸಂಸ್ಥಾಪಕ ಅಧ್ಯಕ್ಷ ಜಿ.ಮಾದೇಗೌಡ, ಸಬರಮತಿ ಆಶ್ರಮ ಅಭಿವೃದ್ಧಿ ಸಮಿತಿ ಅಧ್ಯಕ್ಷ ಕೆ.ಟಿ.ವೀರಪ್ಪ, ಮೈಸೂರು ವಿ.ವಿ ಕುಲಸಚಿವ ಪ್ರೊ.ರಾಜಣ್ಣ, ಇಂದಿರಾ ಕೃಷ್ಣಪ್ಪ, ಡಾ.ವೂಡೇ ಪಿ.ಕೃಷ್ಣ ಭಾಗವಹಿಸಿದ್ದರು. ಗಾಂಧಿ ಭವನದ ನಿರ್ದೇಶಕ ಪ್ರೊ.ಎಸ್.ಶಿವರಾಜಪ್ಪ ಸ್ವಾಗತಿಸಿದರು.



ಮೈಸೂರು ವಿಶ್ವವಿದ್ಯಾನಿಲಯದ ಗಾಂಧಿ ಭವನದ ಆವರಣದಲ್ಲಿ ಸ್ಥಾಪಿಸಿರುವ ಸಬರಮತಿ ಆಶ್ರಮದ ಮಾದರಿ ಕಟ್ಟಡವನ್ನು ಉದ್ಘಾಟಿಸಿದ ಸಂದರ್ಭದಲ್ಲಿ ಕುಲಪತಿ ಪ್ರೊ.ಕೆ.ಎಸ್.ರಂಗಪ್ಪ ಪ್ರೊ.ರವಿವರ್ಮ ಕುಮಾರ್, ಡಾ.ಎ.ಅಣ್ಣಾಮಲೈ, ಜಿ.ಮಾದೇಗೌಡ, ಕೆ.ಟಿ.ವೀರಪ್ಪ, ಪ್ರೊ.ರಾಜಣ್ಣ, ಡಾ.ವೂಡೇ ಪಿ.ಕೃಷ್ಣ ಇದ್ದಾರೆ

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ
VIJAYAVANI MYSURU
2
ಮಂಗಳವಾರ
10 ಜನವರಿ 2017
10 JANUARY 2017

# ಸಬರಮತಿ ಆಶ್ರಮ ಲೋಕಾರ್ಪಣೆ

## ಸಾರ್ವಜನಿಕರ ವೀಕ್ಷಣೆಗೆ ಲಭ್ಯ | ಗಾಂಧೀಜಿ ಬಳಸುತ್ತಿದ್ದ ಅಪರೂಪದ ವಸ್ತುಗಳ ಪ್ರದರ್ಶನ

■ ವಿಜಯವಾಣಿ ಸುದ್ದಿಜಾಲ ಮೈಸೂರು

ಅಹಮದಾಬಾದ್‌ನಲ್ಲಿರುವ ಸಬರಮತಿ ಆಶ್ರಮಕ್ಕೆ ಭೇಟಿ ನೀಡಲು ಸಾಧ್ಯವಾಗಿಲ್ಲವೇ? ಇನ್ಮುಂದೆ, ಚಿಂತೆ ಮಾಡಬೇಡಿ.

ನಗರದ ಮಾನಸಗಂಗೋತ್ರಿಯಲ್ಲಿಯೇ ಗಾಂಧೀಜಿ ಅವರ ಬದುಕಿನ ಮತ್ತು ಚಿಂತನೆಯ ಮೂರ್ತರೂಪವಾದ ಸಬರಮತಿ ಆಶ್ರಮ ತಲೆ ಎತ್ತಿದೆ. ಇಲ್ಲಿನ ಗಾಂಧಿ ಭವನದ ಆವರಣದಲ್ಲಿ ವಿರಾಜಮಾನವಾಗಿರುವ ಈ ಆಶ್ರಮವನ್ನು ಸೋಮವಾರ ಸಂಜೆ ಲೋಕಾರ್ಪಣೆಗೊಳಿಸಲಾಗಿದ್ದು, ಸಾರ್ವಜನಿಕರ ವೀಕ್ಷಣೆಗೆ ಅನುವು ಮಾಡಿಕೊಡಲಾಗಿದೆ.

ಗುಜರಾತ್‌ನ ಅಹಮದಾಬಾದ್ ಮಡಿಲಲ್ಲಿ ಹರಿಯುವ ಸಬರಮತಿ ನದಿ ತೀರದಲ್ಲಿ 1915ರಲ್ಲಿ ಮಹಾತ್ಮ ಗಾಂಧಿ ಅವರು ಸಬರಮತಿ ಆಶ್ರಮವನ್ನು ಸ್ಥಾಪಿಸಿದ್ದರು. ಅದು ಇದೀಗ ಗಾಂಧೀಜಿ ಆತ್ಮ ಸಾಕ್ಷಿಯಾಗಿದೆ. ಆಶ್ರಮವು ಸುಮಾರು 15 ವರ್ಷಗಳ ಕಾಲ ಸ್ವಾತಂತ್ರ್ಯ ಹೋರಾಟಗಾರರ ಚಟುವಟಿಕೆಯ ಕೇಂದ್ರ ಬಿಂದುವಾಗಿತ್ತು.

ಇಲ್ಲಿ ಕೆಲ ವರ್ಷಗಳ ಕಾಲ ನೆಲೆಸಿದ್ದ ಗಾಂಧೀಜಿಯವರ ಬದುಕಿನ ಕುರುಹುಗಳನ್ನು ತನ್ನ ಒಡಲಲ್ಲಿರಿಸಿಕೊಂಡು ನಿಂತಿರುವ ಈ ಆಶ್ರಮ ಇಂದಿಗೂ ಗಾಂಧಿವಾದಿಗಳ ಪವಿತ್ರ ಸ್ಥಳ. ಇಂತಹವೊಂದು ಐತಿಹಾಸಿಕ ಹಿನ್ನೆಲೆ ಹೊಂದಿರುವ ಆಶ್ರಮದ ತದ್ರೂಪಿಯನ್ನು ನಗರದಲ್ಲಿ ಸ್ಥಾಪಿಸುವ ಮೂಲಕ ಗಾಂಧಿ ತತ್ವಾದರ್ಶವನ್ನು ವಿಸ್ತರಿಸಲು ಉದ್ದೇಶಿಸಲಾಗಿದೆ. ಗುಜರಾತ್‌ನಿಂದ ಆಶ್ರಮದ ಮೂಲ ನಕ್ಷೆ ತರಿಸಿಕೊಂಡು ಇದನ್ನು ನಿರ್ಮಿಸಲಾಗಿದೆ.

ಆಶ್ರಮದಲ್ಲಿ ಗಾಂಧಿ ಪರಿಕಲ್ಪನೆಯನ್ನು ಮರುಸೃಷ್ಟಿಸಲಾಗಿದೆ. ಗಾಂಧಿ ಚಿತ್ರಣ, ದಂಡಯಾತ್ರೆ ದೃಶ್ಯ, ಸ್ವಾತಂತ್ರ್ಯ ಹೋರಾಟದ ಸನ್ನಿವೇಶಗಳು, ಗಾಂಧಿ ಸೆರೆವಾಸ ಅನುಭವಿಸಿದ ಯರವಾಡ ಜೈಲು, ಗಾಂಧೀಜಿ ಕಲ್ಪನೆಯ ಗ್ರಾಮ ನೈರ್ಮಲ್ಯ, ಗ್ರಾಮಸಭೆ, ಮದ್ಯಪಾನ ನಿರ್ಮೂಲನೆ.... ಹೀಗೆ ಇಲ್ಲಿಯ ಪ್ರತಿಯೊಂದು ಚಟುವಟಿಕೆಗಳ ಮೂಲಕ ಗಾಂಧೀಜಿ ಕುರಿತು ಸಮಗ್ರ ಮಾಹಿತಿ ನೀಡುವುದರೊಂದಿಗೆ ಗಾಂಧಿ ಚಿಂತನೆಯತ್ತ ಯುವ ಪೀಳಿಗೆಗೆ ಪ್ರೇರೇಪಿಸಲಾಗಿದೆ.

ಸಮಾರಂಭದಲ್ಲಿ ಮಾತನಾಡಿದ ಮಾಜಿ ಅಡ್ವೋಕೇಟ್ ಜನರಲ್ ಪ್ರೊ.ರವಿವರ್ಮಕುಮಾರ್, ಅಭಿವ್ಯಕ್ತಿ ಸ್ವಾತಂತ್ರ್ಯ ಕಳೆಗುಂದಿರುವ ಸಂಕಷ್ಟ ಸಂದರ್ಭದಲ್ಲಿ ಇಲ್ಲಿ ಸಬರಮತಿ ಆಶ್ರಮ ಸ್ಥಾಪಿಸಿರುವುದು ಹೊಸ ಹೋರಾಟಕ್ಕೆ ಸ್ಫೂರ್ತಿಯಾಗಿದೆ. ವಿದ್ಯಾರ್ಥಿಗಳು ಅಭಿವ್ಯಕ್ತಿ ಸ್ವಾತಂತ್ರ್ಯ ವೃದ್ಧಿಗೆ, ಅನ್ಯಾಯದ ವಿರುದ್ಧ ಚಳವಳಿಗೆ ಈ ಸ್ಥಳವನ್ನು ಸದ್ವಿನಿಯೋಗ ಪಡೆದುಕೊಳ್ಳಬೇಕು ಎಂದರು.

ಹಿಂಸೆಗೆ ಹಿಂಸೆಯೇ ಪರಿಹಾರವಾಗದೆ ಶಾಂತಿ ನೆಲೆಸಿ, ಅಸತ್ಯಕ್ಕೆ ಅಸತ್ಯವೇ ಪರಿಹಾರವಾಗದೆ ಸಭ್ಯತನವೇ ಮುಖ್ಯವಾಗಿ, ದೇವರೇ ಸತ್ಯವಲ್ಲ, ಸತ್ಯವೇ ದೇವರು ಎಂಬ ಗಾಂಧಿ ಮಾತು ನಮಗೆಲ್ಲ ಆದರ್ಶವಾಗಲಿದೆ. ನಾವು ವಿದ್ಯಾರ್ಥಿಗಳಾಗಿದ್ದಾಗ ಗಾಂಧಿ ಭವನವು ಹೋರಾಟದ ತಾಣವಾಗಿತ್ತು. ಪ್ರೊ. ಎಂ.ಡಿ. ನಂಜುಂಡಸ್ವಾಮಿ, ಪೂರ್ಣಚಂದ್ರ ತೇಜಸ್ವಿ, ಪಿ. ಲಂಕೇಶ್, ಪ್ರೊ.ಕೆ. ರಾಮದಾಸ್ ಅವರು ಜೆಪಿ ಚಳವಳಿಯನ್ನು ಈ ಸ್ಥಳದಿಂದಲೇ ಚಾಲನೆಗೆ ತಂದರು ಎಂದು ಸ್ಮರಿಸಿದರು. ಕುಲಪತಿ ಪ್ರೊ.ಕೆ.ಎಸ್.ರಂಗಪ್ಪ ಕಾರ್ಯಕ್ರಮ ಉದ್ಘಾಟಿಸಿದರು. ಮಾಜಿ ಸಂಸದ, ಗಾಂಧಿವಾದಿ ಜಿ.ಮಾದೇಗೌಡ, ಕೃಷ್ಣಪ್ಪ ಸೇವಾ ಟ್ರಸ್ಟ್‌ನ ಅಧ್ಯಕ್ಷೆ ಇಂದಿರಾ ಕೃಷ್ಣಪ್ಪ, ರಾಜ್‌ಘಾಟ್ ಗಾಂಧಿ ಸಂಗ್ರಹಾಲಯ ನಿರ್ದೇಶಕ ಡಾ.ಎ.ಅಣ್ಣಾಮಲೈ, ಗಾಂಧಿ ಶಾಂತಿ ಪ್ರತಿಷ್ಠಾನದ ಡಾ. ವೂಡೇ ಪಿ.ಕೃಷ್ಣ, ಸಬರಮತಿ ಆಶ್ರಮ ಅಭಿವೃದ್ಧಿ ಸಮಿತಿಯ ಅಧ್ಯಕ್ಷ ಕೆ.ಟಿ.ವೀರಪ್ಪ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಪ್ರೊ.ಜಿ.ಬಿ.ಶಿವರಾಜು, ಸಿಡಿಸಿ ನಿರ್ದೇಶಕ ಪ್ರೊ.ಬಿ.ಕೆ.ಶಿವಣ್ಣ, ಗಾಂಧಿ ಭವನದ ನಿರ್ದೇಶಕ ಪ್ರೊ.ಎಸ್. ಶಿವರಾಜಪ್ಪ ಪಾಲ್ಗೊಂಡಿದ್ದರು.



ಮಾನಸಗಂಗೋತ್ರಿಯ ಗಾಂಧಿಭವನ ಆವರಣದಲ್ಲಿ ಉದ್ಘಾಟನೆಗೊಂಡ ಸಬರಮತಿ ಆಶ್ರಮದಲ್ಲಿ ಗಾಂಧೀಜಿಯವರು ಬಳಸುತ್ತಿದ್ದ ಅಪರೂಪದ ವಸ್ತುಗಳನ್ನು ಕುತೂಹಲದಿಂದ ವೀಕ್ಷಿಸುತ್ತಿರುವ ಅತಿಥಿಗಳು.

### 40 ಲಕ್ಷ ರೂ. ವೆಚ್ಚ

ಅಂದಾಜು 40 ಲಕ್ಷ ರೂ.ವೆಚ್ಚದಲ್ಲಿ ನಿರ್ಮಾಣಗೊಂಡಿರುವ ಈ ಆಶ್ರಮದಲ್ಲಿ ಗಾಂಧೀಜಿ ಬಳಸುತ್ತಿದ್ದ ಅನೇಕ ಅಪರೂಪದ ವಸ್ತುಗಳಿವೆ. ಗಾಂಧಿ ತಾತನ ಹಾಸಿಗೆ, ಪುಸ್ತಕ ಇಡುತ್ತಿದ್ದ ಮರದ ಕಪಾಟು, ನೂಲು ನೇಯುತ್ತಿದ್ದ ಚರಕ, ಪುಸ್ತಕ ಓದಲು ಬಳಸುತ್ತಿದ್ದ ಕನ್ನಡಕ, ಗಡಿಯಾರ, ಮೂರು ಕೋತಿಗಳ ಪ್ರತಿಮೆ ಹಾಗೂ ಚರ್ಮ-ಮರದ ಪಾದರಕ್ಷೆಗಳು ಒಂದೊಂದು ಕಥೆ ಹೇಳುತ್ತಿವೆ. ಗೋಡೆಗಳಲ್ಲಿ ಗಾಂಧೀಜಿಯವರ ಅಪರೂಪದ ಛಾಯಾಚಿತ್ರಗಳನ್ನು ಪ್ರದರ್ಶಿಸಲಾಗಿದೆ.

ಮೈಸೂರು ಮಿತ್ರ
ಮಂಗಳವಾರ 10 ಜನವರಿ 2017



# ಮಾನಸಗಂಗೋತ್ರಿಯಲ್ಲಿ 'ಮಾದರಿ ಸಬರಮತಿ ಆಶ್ರಮ' ಉದ್ಘಾಟನೆ

## ಗಾಂಧಿ ಚಿಂತನೆಗಳ 10 ಕೃತಿಗಳ ಬಿಡುಗಡೆ

ಮೈಸೂರು,ಜ.9(ಮೈಡಿಎಸ್)- ಮೈಸೂರು ವಿಶ್ವವಿದ್ಯಾನಿಲಯದ ಶತಮಾನೋತ್ಸವ ಹಾಗೂ ಗಾಂಧಿ ಭವನದ ಸುವರ್ಣ ಸಂಭ್ರಮದ ಅಂಗವಾಗಿ ಮಾನಸಗಂಗೋತ್ರಿಯ ಗಾಂಧಿ ಅಧ್ಯಯನ ಕೇಂದ್ರದ ಆವರಣದಲ್ಲಿ ನೂತನವಾಗಿ ನಿರ್ಮಾಣಗೊಂಡಿರುವ 'ಮಾದರಿ ಸಬರಮತಿ ಆಶ್ರಮ' ಸೋಮವಾರ ಉದ್ಘಾಟನೆಗೊಂಡಿತು.

ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿ ಪ್ರೊ.ಕೆ.ಎಸ್.ರಂಗಪ್ಪ 'ಮಾದರಿ ಸಬರಮತಿ ಆಶ್ರಮ'ವನ್ನು ಉದ್ಘಾಟಿಸಿದರು. ಇದೇ ವೇಳೆ ಬೆಂಗಳೂರಿನ ಪ್ರಸಿದ್ಧ ವಕೀಲ ಹಾಗೂ ನಿವೃತ್ತ ಅಡ್ವೋಕೇಟ್ ಜನರಲ್ ಪ್ರೊ.ರವಿವರ್ಮಕುಮಾರ್ ಅವರು ಗಾಂಧಿ ಚಿಂತನೆಗಳ ಕುರಿತ 10 ಪುಸ್ತಕಗಳನ್ನು ಬಿಡುಗಡೆಗೊಳಿಸಿದರು.

ನಂತರ ಮೈಸೂರು ವಿವಿ ಕುಲಪತಿ ಪ್ರೊ.ಕೆ.ಎಸ್.ರಂಗಪ್ಪ ಮಾತನಾಡಿ, ಗಾಂಧೀಜಿ ಅವರು ಈ ಭೂಮಿಯಲ್ಲಿ ಹುಟ್ಟಿದ್ದೇ ನಮ್ಮೆಲ್ಲರ ಪುಣ್ಯ. ಅಂತಹ ಮಹಾನ್‌ವ್ಯಕ್ತಿಯ ಕುರಿತ ಸಬರಮತಿ ಆಶ್ರಮ ಕಟ್ಟಿರುವುದು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಶೋಭೆ ತಂದಿದೆ ಎಂದು ಹೇಳಿದರು.

ನನ್ನೊಬ್ಬನಿಂದ ವಿವಿಯನ್ನು ಕಟ್ಟಲು ಸಾಧ್ಯವಿಲ್ಲ. ಎಲ್ಲರೂ ಬೆಂಬಲ ನೀಡಿದ್ದರಿಂದ ಶೈಕ್ಷಣಿಕವಾಗಿ ಹಾಗೂ ಅಭಿವೃದ್ಧಿ ಕೆಲಸಗಳನ್ನು ಮಾಡಿದ್ದು, ಈಗ ನೂತನವಾಗಿ ನಿರ್ಮಿಸಿರುವ ಮಾದರಿ ಸಬರಮತಿ ಆಶ್ರಮ ಮೈಸೂರು ವಿವಿಯ ಶತಮಾನೋತ್ಸವದ ಕೊಡುಗೆ ಎಂದು ಭಾವಿಸಿದ್ದೇನೆ. ಮುಂದೆಯೂ ಇಂಥ ಕಾರ್ಯ ಚಟುವಟಿಕೆಗಳು ನಡೆಯಲಿ ಎಂದರು.


ಮೈಸೂರು ವಿವಿ ಮಾನಸ ಗಂಗೋತ್ರಿಯ ಗಾಂಧಿ ಅಧ್ಯಯನ ಕೇಂದ್ರದ ಆವರಣದಲ್ಲಿ ನೂತನವಾಗಿ ನಿರ್ಮಾಣಗೊಂಡಿರುವ 'ಮಾದರಿ ಸಬರಮತಿ ಆಶ್ರಮ'ವನ್ನು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿ ಪ್ರೊ.ಕೆ.ಎಸ್.ರಂಗಪ್ಪ ಉದ್ಘಾಟಿಸಿದರು.

ಬೆಂಗಳೂರಿನ ಪ್ರಸಿದ್ಧ ವಕೀಲ ಹಾಗೂ ನಿವೃತ್ತ ಅಡ್ವೋಕೇಟ್ ಜನರಲ್ ಪ್ರೊ.ರವಿವರ್ಮಕುಮಾರ್ ಅವರು ಮಾತನಾಡಿ, ಗಾಂಧಿ ಭವನವು ಮೈಸೂರು ವಿವಿಯಲ್ಲಿ ನಡೆಯುತ್ತಿದ್ದ ಅನ್ಯಾಯಗಳ ವಿರುದ್ಧದ ಪ್ರತಿಭಟನೆಯ ಕೇಂದ್ರವಾಗಿತ್ತು. ವಿಶೇಷವಾಗಿ ಜಯಪ್ರಕಾಶ್ ನಾರಾಯಣ್ ಅವರ ಚಳವಳಿಯಲ್ಲಿ ನಿರಂತರವಾಗಿ ಸಭೆಗಳನ್ನು ಮಾಡಿ ವಿವಿಗಳಲ್ಲಿ ನಡೆಯುವ ಅನ್ಯಾಯ, ಜಾತೀಯತೆಯ ವಿರುದ್ಧ ಪ್ರತಿಭಟಿಸುತ್ತಿದ್ದೆವು. ಪ್ರೊ.ನಂಜುಂಡಸ್ವಾಮಿ, ಲಂಕೇಶ್, ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಮತ್ತಿತರರು ಅನೇಕ ಪ್ರಗತಿಪರ ಚಳವಳಿಗಳನ್ನು ರೂಪಿಸಿದ್ದರು. ಹಾಗಾಗಿ ಗಾಂಧಿ ಭವನವು ಪ್ರತಿಭಟನೆಗಳ ಜನ್ಮಸ್ಥಳವಾಗಿತ್ತು ಎಂದು ನೆನಪುಗಳಿಗೆ ಜಾರಿದರು.

ದೇಶದ ಎಲ್ಲ ಸಮಸ್ಯೆಗಳಿಗೂ ಗಾಂಧಿ ತತ್ವಗಳಲ್ಲಿ ಪರಿಹಾರವಿದೆ. ಹಿಂಸೆಗೆ ಅಹಿಂಸೆ, ಅಸತ್ಯಕ್ಕೆ ಸತ್ಯ ಉತ್ತರ ಎಂದು ಗಾಂಧೀಜಿ ಸಾರಿ ಹೇಳಿದ್ದರು. ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಧ್ವನಿ ನೀಡಲು ಗಾಂಧಿಭವನ ಮತ್ತು ಸಬರಮತಿ ಆಶ್ರಮದ ಪ್ರತಿರೂಪ ಬಹಳ ಮುಖ್ಯ. ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪೋಷಿಸುತ್ತಿದ್ದ ಗಾಂಧಿ ಭವನವು ಇನ್ನು ಮುಂದೆಯೂ ಸಮಾಜದ ಅನ್ಯಾಯಗಳನ್ನು ಪ್ರಶ್ನಿಸುವ ಕೇಂದ್ರವಾಗಬೇಕು. ಸಬರಮತಿ ಆಶ್ರಮದ ಪ್ರತಿರೂಪ ಕಟ್ಟಡ ಅಭಿವ್ಯಕ್ತಿ ಸ್ವಾತಂತ್ರ್ಯದ ಉನ್ನತಮಟ್ಟದ ಕೇಂದ್ರವಾಗಲಿ ಎಂದು ಹಾರೈಸಿದರು.

ಮಂಡ್ಯ ಗಾಂಧಿ ಭವನ ಅಧ್ಯಕ್ಷ ಡಾ.ಜಿ.ಮಾದೇಗೌಡ, ರಾಜ್‌ಘಾಟ್‌ನ ಮಹಾತ್ಮ ಗಾಂಧಿ ವಸ್ತುಸಂಗ್ರಹಾಲಯದ ನಿರ್ದೇಶಕ ಡಾ.ಎ.ಅಣ್ಣಾಮಲೈ, ಸಬರಮತಿ ಆಶ್ರಮ ಅಭಿವೃದ್ಧಿ ಸಮಿತಿ ಅಧ್ಯಕ್ಷ ಕೆ.ಟಿ.ವೀರಪ್ಪ, ಮೈಸೂರು ವಿ.ವಿ ಕುಲಸಚಿವ ಪ್ರೊ.ಆರ್.ರಾಜಣ್ಣ, ಇಂದಿರಾ ಕೃಷ್ಣಪ್ಪ, ಡಾ.ವೂಡೇ ಪಿ.ಕೃಷ್ಣ, ಗಾಂಧಿ ಭವನದ ನಿರ್ದೇಶಕ ಪ್ರೊ.ಎಸ್. ಶಿವರಾಜಪ್ಪ ಮತ್ತಿತರರು ಉಪಸ್ಥಿತರಿದ್ದರು.

## 50 ಲಕ್ಷ ರೂ.ವೆಚ್ಚದಲ್ಲಿ ಸಬರಮತಿ ಆಶ್ರಮ ನಿರ್ಮಾಣ

ಮೈಸೂರು,ಜ.9(ಮೈಡಿಎಸ್)- ಮಹಾತ್ಮ ಗಾಂಧೀಜಿ ಅವರು ಸುಮಾರು 100 ವರ್ಷಗಳ ಹಿಂದೆ ಗುಜರಾತ್‌ನ ಅಹಮದಾಬಾದ್‌ನಲ್ಲಿ ನಿರ್ಮಿಸಿರುವ ಸಬರಮತಿ ಆಶ್ರಮವನ್ನು ಕಣ್ತುಂಬಿಕೊಳ್ಳಲು ಮಾನಸಗಂಗೋತ್ರಿಯ ಗಾಂಧಿ ಅಧ್ಯಯನ ಕೇಂದ್ರಕ್ಕೆ ಭೇಟಿ ನೀಡಿದರೆ ಸಾಕು.

ಮೈಸೂರು ವಿಶ್ವವಿದ್ಯಾನಿಲಯವು ಸುಮಾರು 50 ಲಕ್ಷ ರೂ.ವೆಚ್ಚದಲ್ಲಿ 333 ಚ.ಮೀ ವಿಸ್ತೀರ್ಣದಲ್ಲಿ ಮಾದರಿ ಸಬರಮತಿ ಆಶ್ರಮವನ್ನು ನಿರ್ಮಿಸಿದ್ದು, ಇಲ್ಲಿ ಗಾಂಧೀಜಿ ಅವರ ಹೋರಾಟ ಮತ್ತು ತತ್ವಸಿದ್ಧಾಂತಗಳ ಚಿತ್ರಣಗಳು, ಅವರು ಬಳಸುತ್ತಿದ್ದ ಕೋಲು, ಗಡಿಯಾರ, ಕನ್ನಡಕ, ಹಾಸಿಗೆ, ದಿಂಬುಗಳು, ಕಾಗದ ಪತ್ರಗಳ ಸಂಗ್ರಹ, ಗಾಂಧೀಜಿ ಅವರ ಜೀವನ ಕುರಿತ ಪುಸ್ತಕಗಳು, ದೆಹಲಿಯ ರಾಜ್‌ಘಾಟ್ ಮ್ಯೂಸಿಯಂನಿಂದ ತರಿಸಲಾದ 150ಕ್ಕೂ ಅಪರೂಪದ ಫೋಟೋಗಳು ಲಭ್ಯವಿವೆ. ಅಲ್ಲದೆ, ಆಶ್ರಮದ ಮುಂಭಾಗ ಗಾಂಧಿ ಪ್ರತಿಮೆ ಇರಿಸಲಾಗಿದ್ದು, ಗಾಂಧೀಜಿ ಪತ್ನಿ ಕಸ್ತೂರಿ ಬಾ, ಶಿಷ್ಯ ಮಹದೇವ ದೇಸಾಯಿ, ಅಡುಗೆ ಕೋಣೆ, ಅತಿಥಿಗೃಹ ಹಾಗೂ ಗಾಂಧೀಜಿ ಅವರು ಅಧ್ಯಯನ ನಡೆಸಿದ ಮಾದರಿ ಕೊಠಡಿಗಳನ್ನು ವೀಕ್ಷಿಸಬಹುದಾಗಿದೆ.